# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪೂ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

‘ एतज्ज्ञेयं नित्यमेवाऽऽत्मसंस्थं नातःपरं वेदितव्यं हि किंचित् ’

ಸಂಪುಟ ೫೪ ಫೆಬ್ರವರಿ ೧೯೮೫ ಸಂಚಿಕೆ ೭

## ವಿಷಯಗಳು



ಪತ್ರಿಕೆಯ ಚಂದಾ

ವರ್ಷಕ್ಕೆ

ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦



ಹೊಸ ಚಂದಾದಾರರನ್ನು ಕೂಡಿಸಿ ಪತ್ರಿಕೆಯನ್ನು ಪ್ರೋತ್ಸಾಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ:

ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

February 1985

# ಕಾರ್ಯಾಲಯದ ಸುದ್ದಿ

**ಪಾಠಪ್ರವಚನಗಳು :** ಪಂಡಿತರ ಪ್ರವಾಸಕಾಲದಲ್ಲಿ ವಿದ್ಯಾರ್ಥಿ ಶ್ರೀ ಕೃಷ್ಣಮೂರ್ತಿಗಳು 'ಭಕ್ತಿಚಂದ್ರಿಕೆ' ಗ್ರಂಥವನ್ನು ಕುರಿತು ಪ್ರವಚನಗಳನ್ನು ನಡೆಯಿಸಿದರು. ಈಗ ಪಂಡಿತರು ಶ್ರೀಮದ್ಭಾಗವತ ಏಕಾದಶಸ್ಕಂಧ- ಪುರಾಣವನ್ನು ಮುಂದುವರೆಸಿರುತ್ತಾರೆ. ವಿದ್ಯಾರ್ಥಿ ಶ್ರೀ ಕೃಷ್ಣಮೂರ್ತಿಯವರ ವಿವಾಹಶುಭಕಾರ್ಯದ ನಿಮಿತ್ತ ಉಳಿದ ಪಾಠಗಳನ್ನು ಮುಂದೂಡಲಾಗಿದ್ದು ಅವರು ಹಾಜರಾದ ಅನಂತರ ಮುಂದುವರೆಸಲಾಗುವದು.

**ಗ್ರಂಥಸಿದ್ಧತೆ: ಮುದ್ರಣ :** (೧) ಸರಸ್ವತೀರಹಸ್ಯೋಪನಿಷಚ್ಚಂದ್ರಿಕೆ- ಎಂಬ ಚಿಕ್ಕಪುಸ್ತಕವನ್ನು ಪಂಡಿತರು ಈಚೆಗೆ ಸಿದ್ಧಗೊಳಿಸಿದ್ದಾರೆ. ಇದರ ಮುದ್ರಣವೆಚ್ಚವನ್ನು ಶ್ರೀ ಅರಕಲಗೂಡು ಭಾಗೀರಥಮ್ಮನವರು ವಹಿಸುವದಾಗಿ ವಾಗ್ದಾನಮಾಡಿದ್ದಾರೆ. (೨) ಬೃಹದಾರಣ್ಯಕ- ಎರಡನೇ ಸಂಪುಟ- ಪೀಠಿಕಾಭಾಗವು ಅಚ್ಚಾಗುತ್ತಿದೆ. (೩) ವೇದಾಂತಡಿಂಡಿಮ (೪) ಸದ್ಗುರುಚರಿತಾಮೃತ (೫) ದೇವೀಮಾಹಾತ್ಮ್ಯ- ಗ್ರಂಥಗಳ ಮುದ್ರಣವೂ ಸಾಗುತ್ತಿದೆ.

**ಸಂಪಾದಕರು :** ಶಿವಮೊಗ್ಗ-ಧಾರವಾಡ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಪೂರೈಸಿಕೊಂಡು ಹಿಂದಿರುಗಿದ್ದಾರೆ. **ಧಾರವಾಡ**ದಲ್ಲಿ ಈ ಪಂಡಿತರ ಗೀತಾಪ್ರವಚನಗಳೂ ದಕ್ಷಿಣಾಮೂರ್ತಿಸ್ತೋತ್ರದ ಮೇಲೆ ನೀಡಿದ ವ್ಯಾಖ್ಯಾನವೂ ಮಹಾಜನರಿಗೆ ಬಹಳವಾಗಿ ರುಚಿಸಿದವು. ಶಾಸ್ತ್ರೀಯಚೌಕಟ್ಟನ್ನು ಮೀರದೆ ಹಿತಮಿತವಾದ ವಿವರಣೆಗಳಿಂದ ಪ್ರತಿಪಾದ್ಯವಿಷಯವನ್ನು ಎಲ್ಲಾ ಮಟ್ಟದ ಜನರಿಗೂ ಮೆಚ್ಚುಗೆಯಾಗುವಂತೆ ಮಂಡಿಸಿದ್ದು ಅಲ್ಲಿಯ ಜನರಿಗೆ ಹೊಸದಾಗಿತ್ತು; ಹಾಗೂ ಬೋಧಪ್ರದವಾಗಿತ್ತು. ಪಂಡಿತಪ್ರಕಾಂಡ ವಿದ್ವಾನ್ ಶ್ರೀ ಬಾಲಚಂದ್ರ ಶಾಸ್ತ್ರಿಗಳು ಈ ಉಪನ್ಯಾಸಗಳ ಕಾಲಕ್ಕೆ ಉಪಸ್ಥಿತರಾಗಿದ್ದು ಉಪಸಂಹಾರಭಾಷಣದಲ್ಲಿ ಧಾರವಾಡದ ನಾಗರಿಕರ ಪರವಾಗಿ ತಮ್ಮ ಹಾರ್ದಿಕಮೆಚ್ಚುಗೆಯನ್ನು ವ್ಯಕ್ತಪಡಿಸಿ ಪಂಡಿತರನ್ನು ಆಶೀರ್ವದಿಸಿದರು. **ಶಿವಮೊಗ್ಗ**ದಲ್ಲಿ ಚಿನ್ಮಯಮಿಷನ್‌ನ ಆಶ್ರಯದಲ್ಲಿ ಪಂಡಿತರು ಎಂದಿನಂತೆ ಒಂಭತ್ತುದಿನಗಳ ಕಾಲ ಕಠೋಪನಿಷತ್ತಿನ ಎರಡನೆಯ ಅಧ್ಯಾಯವನ್ನು ಶಂಕರಭಾಷ್ಯಸಮೇತ ಪ್ರವಚನಮಾಡಿದರು.

**ಶ್ರೀ ಶ್ರೀ ಜಯಂತ್ಯುತ್ಸವ :** ರಾ ಯ ದು ರ್ಗ ದ "ಅಧ್ಯಾತ್ಮಪ್ರಚಾರಸೇವಾಶ್ರಮ"ದಲ್ಲಿ ತಾ॥ 16-12-84 ರಿಂದ ಐದುದಿನಗಳ ಕಾಲ ಶ್ರೀಭಗವತ್ಪಾದಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶ್ರೀ ಶ್ರೀ ಜಯಂತ್ಯುತ್ಸವವು ವಿಜೃಂಭಣೆಯಿಂದ ನೆರವೇರಿತು. ಬಹಳ ಜನ ಮುಮುಕ್ಷುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

**ಅಧ್ಯಾತ್ಮಜ್ಯೋತಿ :** ರಾಯದುರ್ಗದ ಶಾಖಾಕಾರ್ಯಾಲಯದಲ್ಲಿ ಶ್ರೀ ಲಕ್ಷ್ಮೀಕಾಂತಶರ್ಮರ ಸಂಪಾದಕತ್ವ ಹಾಗೂ **ಮೇಲ್ವಿಚಾರಣೆ**ಯಲ್ಲಿ "ಅಧ್ಯಾತ್ಮಜ್ಯೋತಿ" ಎಂಬ ಹೆಸರಿನಿಂದ ತೆಲುಗು **ಸಮಿತಿ**ಯವರು ಮಾಸಪತ್ರಿಕೆಯೊಂದನ್ನು ಪ್ರಾರಂಭಿಸಲು ನಿಶ್ಚಯಿಸಿದ್ದಾರೆ. **ಅಧ್ಯಾತ್ಮ**ವಿಚಾರರಸಿಕರಾದ ತೆಲುಗುಭಾಷಾ ಬಾಂಧವರು ಈ ಪ್ರಯತ್ನವನ್ನು **ಪ್ರೋತ್ಸಾ**ಹಿಸಬೇಕಾಗಿ ಪ್ರಾರ್ಥನೆ.

---

# ಅಧ್ಯಾತ್ಮಪ್ರಕಾಶ

|| ಓಂ ||



ಸಂಪುಟ ೫೪]    ವರ್ಷಕ್ಕೆ ರೂ. ೧೫-೦೦ ;  ಬಿಡಿ ಸಂಚಿಕೆಗೆ : ರೂ. ೧.೨೫    [ಸಂಚಿಕೆ ೬

ಫೆಬ್ರುವರಿ-1985

( ಶ್ರೀ ರಕ್ತಾಕ್ಷಿಸಂವತ್ಸರದ ಮಾಘ )

## ಸುಷುಪ್ತಿಯಲ್ಲಿ ಪರಮಾತ್ಮಪ್ರಾಪ್ತಿಗೆ ದೃಷ್ಟಾಂತ

**ಓಂ || ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂ ದಿಶಂ**
**ಪತಿತ್ವಾ ಅನ್ಯತ್ರಾಯತನಮಲಬ್ಧ್ವಾ ಬಂಧನಮೇವ**
**ಉಪಶ್ರಯತೇ ಏವಮೇವ ಖಲು ಸೋಮ್ಯ ತನ್ಮನಃ**
**....ಪ್ರಾಣಮೇವೋಪಶ್ರಯತೇ ಪ್ರಾಣಬನ್ಧನಂ**
**ಹಿ ಸೋಮ್ಯ ಮನಃ ||** —ಛಾಂದೋಗ್ಯೋಪನಿಷತ್ತು ೬-೮-೨.

**ಭಾವಾರ್ಥ:-** ಅದು ಹೇಗೆಂದರೆ : ಹಕ್ಕಿಯು ದಾರದಿಂದ ಕಟ್ಟಲ್ಪಟ್ಟು ದಿಕ್ಕುದಿಕ್ಕಿಗೆ ಹಾರಾಡಿ ಮತ್ತೊಂದೆಡೆಯಲ್ಲಿ ಇಂಬನ್ನು ಪಡೆಯದೆ ಕಟ್ಟಿದ ಸ್ಥಲವನ್ನೇ ಆಶ್ರಯಿಸುವದೋ ಹಾಗೆಯೇ ಈ ಮನಸ್ಸುಕೂಡ ಪ್ರಾಣವನ್ನೇ ಆಶ್ರಯಿಸುತ್ತದೆ. ಸೋಮ್ಯನೆ, ಮನಸ್ಸು ಪ್ರಾಣಬಂಧನವಲ್ಲವೆ ?

[ಕಾಲಿಗೆ ದಾರವನ್ನು ಕಟ್ಟಿ ದಾರದ ತುದಿಯನ್ನು ಒಂದು ಗೂಟಕ್ಕೆ ಬಿಗಿದಿದ್ದರೆ, ಅಂಥ ಹಕ್ಕಿಯು ಹಾರಾಡಿ ಸೋತು ವಿಶ್ರಾಂತಿಗಾಗಿ ಗೂಟವನ್ನೇ ಆಶ್ರಯಿಸುವಂತೆ ಮನ ಉಪಾಧಿಕನಾದ ಜೀವನೂ ಆಯಾಸಪರಿಹಾರಕ್ಕಾಗಿ ಪ್ರಾಣನೆಂಬ ಪರಮೇಶ್ವರನನ್ನೇ ಬಂದು ಸೇರುವನು- ಎಂದಭಿಪ್ರಾಯ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಜೀವನಿಗೆ ಪರಮಾತ್ಮನೇ ಆಶ್ರಯ

ಹಿಂದಿನ ಸಂದೇಶದಲ್ಲಿ ಶ್ರುತಿಯು ಅಪೂರ್ವವಾದ ವಿಷಯವನ್ನೇ ತಿಳಿಸುತ್ತದೆ- ಎಂದು ಜ್ಞಾಪಕಮಾಡಿಕೊಟ್ಟು ಸ್ವಪಿತಿ- ಎಂಬಲ್ಲಿ ಜೀವನು ಸುಷುಪ್ತಿಯಲ್ಲಿ ಪರಮಾತ್ಮನಲ್ಲಿ ಒಂದಾಗಿರುತ್ತಾನೆಂಬ ತತ್ತ್ವವನ್ನು ವೇದವು ತಿಳಿಸಿರುವದನ್ನು ಮನಗಾಣಿಸಿಕೊಡಲಾಗಿದೆ. ಈ ರೀತಿಯಾದ ಏಕತ್ವಪ್ರಾಪ್ತಿಗೆ ಲೌಕಿಕೋದಾಹರಣೆಯನ್ನು ಕೊಟ್ಟು ಜಿಜ್ಞಾಸುವನ್ನು ಅನುಗ್ರಹಿಸಲು ಇನ್ನುಮುಂದೆ ಶ್ರುತಿಯು ಹೊರಟಿರುತ್ತದೆ. ಯಾವದೇ ವಸ್ತುವಾಗಲಿ, ತಾನು ಲಯವಾಗುವಾಗ ತನ್ನ ಕಾರಣದಲ್ಲಿಯೇ ಒಂದಾಗಿಬಿಡುವದು ಲೋಕಪ್ರಸಿದ್ಧವಾಗಿದೆ. ಒಡವೆಯು ಚಿನ್ನವಾಗುವದು, ಮಡಕೆಯು ಮಣ್ಣಾಗುವದು- ಇದಕ್ಕೆ ಉದಾಹರಣೆಗಳು. ಹಾಗೆಯೇ ಸೃಷ್ಟಿಕಾಲಕ್ಕೆ ಸದ್ಬ್ರಹ್ಮದಿಂದ ಜೀವರೂಪದಲ್ಲಿ ಹೊರಬಂದ ಜೀವಾತ್ಮನು- ಗುಳ್ಳೆಯು ತಾನು ಒಡೆದುಕೊಂಡಾಗ ನೀರೇ ಆಗಿಬಿಡುವಂತೆ- ಲಯಕಾಲಕ್ಕೆ ಸದ್‌ಬ್ರಹ್ಮವೇ ಆಗಿಬಿಡುವದು ನ್ಯಾಯವಾಗಿದೆ. ಅಲ್ಲದೆ ಜೀವಾತ್ಮನೂ ಚೇತನನಾಗಿದ್ದು ವ್ಯವಹಾರಮಾಡುವದರಿಂದ ಪರಮಚೇತನವಾದ ತನ್ನ ಸ್ವಸ್ವರೂಪವಾದ ಸತ್ತಿನಲ್ಲಿ ಒಂದಾಗುವದೆಂಬುದು ನಿಜವಾಗಿ ಜೀವಾತ್ಮನಿಗೆ ಹೆಚ್ಚಿನ ಮುಕ್ತಿಯೇ- ಪರಮಾನಂದವೇ ಆಗಿರುತ್ತದೆ. ಮತ್ತು ಜೀವನಿಗೆ ಇಂಥ ಆನಂದಸ್ಥಿತಿಯು ಸದ್ಬ್ರಹ್ಮದಲ್ಲಿ ಲಯವಾದ ಹೊರತು ಬೇರೊಂದು ಸ್ಥಳದಲ್ಲಿ ದೊರಕುವಂತೆಯೇ ಇಲ್ಲ. ಇದಕ್ಕೆ ಉದಾಹರಣೆಯನ್ನು ಶ್ರುತಿಯು ಈಗ ತಿಳಿಸುತ್ತಿದೆ.

ಚಿಕ್ಕಹುಡುಗರು ತಮಾಷೆಗಾಗಿ ಒಂದು ಜೀರಂಬೆಹುಳುವಿನ ಕಾಲಿಗೆ ದಾರವನ್ನು ಕಟ್ಟಿ ಆ ದಾರದ ತುದಿಯನ್ನು ಒಂದು ಗೂಟಕ್ಕೆ ಕಟ್ಟಿ ಹುಳುವು ಬೇರೆಬೇರೆ ದಿಕ್ಕುಗಳಿಗೆ ಹಾರುತ್ತಿರುವದನ್ನು ನೋಡುತ್ತಾ ಕಾಲಕಳೆಯುವದುಂಟು. ಉಪನಿಷತ್ತು ಈ ದೃಷ್ಟಾಂತವನ್ನೇ ತೆಗೆದುಕೊಂಡು ಜೀವನೆಂಬ ಜೀರಂಬೆಯು ಪ್ರಾಣನೆಂಬ ಹೆಸರಿನ ಪರಮಾತ್ಮನೆಂಬ ಗೂಟದಲ್ಲಿ ಕಟ್ಟಲ್ಪಟ್ಟವನಾಗಿ ಸಂಚಾರಮಾಡುತ್ತಾ ವಿಶ್ರಾಂತಿಗಾಗಿ ಗೂಟದಂತಿರುವ ಪ್ರಾಣನಲ್ಲಿಯೇ ಬಂದು ಸೇರುತ್ತಾನೆ- ಎಂದು ತಿಳಿಸಿರುತ್ತದೆ. ಇಲ್ಲಿ ನಿಜವೇನೆಂದರೆ: ಗೂಟದಂತೆ ಬ್ರಹ್ಮವೇನೂ ಅಚೇತನವಲ್ಲ. ದೃಷ್ಟಾಂತದಲ್ಲಿ ಎಲ್ಲ ವಿಷಯಗಳೂ ವಿವಕ್ಷಿತವಲ್ಲ. ಹಾಗಾದರೆ ಅದು ದೃಷ್ಟಾಂತವೇ ಆಗಲಾರದು. ಆದ್ದರಿಂದ ಹುಳುವು ವಿಶ್ರಾಂತಿಗಾಗಿ ತಾನು ಕಟ್ಟಲ್ಪಟ್ಟ ಜಾಗಕ್ಕೇ ಬರಲೇಬೇಕಾಗಿರುವಂತೆ- ಜೀವನು ತನ್ನ ಶರೀರೇಂದ್ರಿಯಕರಣಗಳು ಸೋತು ಹೋಗಲಾಗಿ ಆಯಾಸಪರಿಹಾರಕ್ಕೆ ಸುಷುಪ್ತಿಯಲ್ಲಿ ಸದ್ಬ್ರಹ್ಮವೆಂಬ ತನ್ನ ಮೂಲಕ್ಕೇ ಬಂದು ಸೇರುತ್ತಾನೆ. ಆಗ ಅವನಿಗೆ ತಾನು ಏನಾದೆನೆಂಬುದು ಎಚ್ಚರದಲ್ಲಿ ಗೊತ್ತಾಗದೆ ಇರುತ್ತದೆ. ಏಕೆಂದರೆ ತಾನು ಜೀವನೆಂಬ ದ್ವೈತಭಾವನೆ

ಯಾಗಲಿ ವ್ಯವಹಾರವಾಗಲಿ ಅಲ್ಲಿರುವದಿಲ್ಲ. **ಇಂಥ ಅನುಭವವನ್ನೇ ಅದ್ವೈತ ವೆನ್ನುವರು. ಇದು ವಿದ್ಯೆಯಿಂದ ಆತ್ಯಂತಿಕವಾಗಿ ಉಂಟಾದರೆ ಮೋಕ್ಷ ವೆಂದೂ ತಾತ್ಕಾಲಿಕವಾಗಿ ಸ್ವಭಾವದಿಂದ ಆದರೆ ಸುಷುಪ್ತಿಯೆಂದೂ ವ್ಯವಹರಿಸಲ್ಪಡುತ್ತದೆ.**

ಈಗ ಜೀವನಿಗೆ ಆಯಾಸವಾಗುವದೆಂದರೇನು ? ವಿಚಾರಮಾಡೋಣ. ಜೀವಾತ್ಮನಲ್ಲಿ ಒಂದು ಮೂಲಭೂತವಾದ ತಪ್ಪು ಆಗಿರುತ್ತದೆ. ಅದು ಯಾವಾಗ, ಹೇಗೆ, ಏಂದು-ಆಯಿತು ಎಂಬುದು ಯಾರಿಗೂ ತಿಳಿಯದು. ಅದನ್ನು ವಿಚಾರಣೆ ಮಾಡಲು ಹೋದವರೆಲ್ಲ ಒಂದಲ್ಲ ಒಂದು ಬಗೆಯಲ್ಲಿ ಆ ತಪ್ಪಿನಲ್ಲಿಯೇ ಸಿಕ್ಕಿಕೊಂಡಿ ರುತ್ತಾರೆ. ಜೊತೆಗೆ ಅದೊಂದು ಮೂಲಭೂತವಾದ ತಪ್ಪೆಂದೇ ಯಾರಿಗೂ ಅನಿಸಿ ರುವದಿಲ್ಲ. ವ್ಯವಹಾರಪ್ರಪಂಚದಲ್ಲಿಯಂತೂ ಯಾರಿಗೂ ಅದರ ಪರಿವೆಯೇ ಇಲ್ಲ. ವ್ಯವಹಾರಕಾಲಕ್ಕೆ ಅದು ಅಗತ್ಯವೂ ಆಗಿರುವದರಿಂದ ಯಾರು ತಾನೆ ಅದನ್ನು ತಪ್ಪೆಂದು ಗುರುತಿಸಲಾದೀತು? ಹಾಗಾದರೆ ಆ ತಪ್ಪು ಆಗಿದೆಯೆಂದು ಗೊತ್ತಾದದ್ದು ಹೇಗೆ ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇ ಜೀವಾತ್ಮನ ಆಯಾಸಸ್ಥಿತಿ. ಬ್ರಹ್ಮನಿಷ್ಠನಿಗೆ ಮಾತ್ರ ಈ ಒಗಟು ತಿಳಿದಿದೆ. ಜೀವಾತ್ಮಜ್ಞಾನಿ ಗಳಿಗೆ ಇದರ ಗುಟ್ಟು ತಿಳಿಯದೆ ಇದೆ. ಇದು ಹಾಗಿರಲಿ. ಆ ತಪ್ಪು ಏನು ? ಎಂಬಿ ದನ್ನು ವಿಚಾರಮಾಡಿದರೆ ಪ್ರತಿಯೊಬ್ಬ ಜೀವಾತ್ಮನೂ 'ನಾನು' 'ನನ್ನದು'-ಎಂದು ಕೊಳ್ಳುತ್ತಿರುವದು. ಇದು ತಪ್ಪೇಕಾದೀತು ? ಸರಿಯೇ ಅಲ್ಲವೆ ? ಎಂದು ನಮಗೆ ಪ್ರಪ್ರಥಮವಾಗಿ ಕಂಡುಬರುತ್ತದೆ. ಕಳ್ಳತನವಾದಾಗ 'ಅಯ್ಯೋ ಪಾಪ'-ಎಂದು ಹೇಳುತ್ತಾ ಕಳ್ಳನನ್ನು ಹುಡುಕಲು ನಮಗೆ ಸಹಾಯಮಾಡಲು ಬಂದಿರುವವನೇ ಕಳ್ಳರ ಪೈಕಿ ಒಬ್ಬನಾಗಿರುವಂತೆ 'ನಾನು'(ಅಹಂ) ಎಂಬುದೂ ಅಂಥ ಅಪರಾಧಿಯೇ ಆಗಿರುತ್ತದೆ. ಅದರಲ್ಲಿ ಅಡಕವಾಗದೆ ಇರುವ ಪ್ರಪಂಚವೇ ಇಲ್ಲ. 'ಅ'ಕಾರದಿಂದ ಹಿಡಿದು 'ಹ'ಕಾರದವರೆಗಿನ ಸಮಸ್ತವೂ ಅದರಲ್ಲಿದೆ-ಎಂದು ಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು ಹೇಳುತ್ತಿದ್ದರು. ಇರಲಿ. ಈ 'ಅಹಂ' ಎಂಬ ತಪ್ಪೇ ಜೀವನ ಬಂಡವಾಳವಾಗಿದೆ. ಇದರಿಂದ ಮುಂದಕ್ಕೆ 'ಮಮ' ಎಂಬ ಮತ್ತೊಂದು ತಪ್ಪು ಸೇರಿಕೊಂಡು ಪ್ರವೃತ್ತಿಯುಂಟಾಗಿ 'ದೇಹೇಂದ್ರಿಯಾದಿವಿಶಿಷ್ಟನಾದವನೇ ನಾನು' ಎಂದುಕೊಂಡಿರುವ ಜೀವನು ಪ್ರತಿದಿನವೂ, ಪ್ರತಿಜನ್ಮದಲ್ಲಿಯೂ, ಪ್ರತಿ ಯೊಂದು ಸೃಷ್ಟಿಯಲ್ಲಿಯೂ ಕರ್ಮಕರ್ತೃವಾಗಿ-ಭೋಕ್ತೃವಾಗಿ ಸಂಕಟಪಡುತ್ತಿರು ವನು. ಇದೇ ಆಯಾಸದ ಪರಮಾವಧಿಯು. ಆದರೆ ಈ ಜೀವನ ಪ್ರಭುವಾದ ಹಾಗೂ ಅಂತರ್ಯಾಮಿಯೂ ಸರ್ವಜ್ಞನೂ ಸರ್ವಶಕ್ತನೂ ಸರ್ವೇಶ್ವರನೂ ಆದ ಪರಮಾತ್ಮನು ಇವನನ್ನು 'ನೀನು ಸಂಸಾರಿಯಲ್ಲ, ಕರ್ತೃವಲ್ಲ, ಭೋಕ್ತೃವಲ್ಲ, ನೀನು ಆನಂದಸ್ವರೂಪನಾದ ನಾನೇ'- ಎಂಬುದನ್ನು ಮನಗಾಣಿಸಿಕೊಡುವದ ಕ್ಕಾಗಿ ಪ್ರತಿದಿನವೂ ತನ್ನಲ್ಲೇ ಸ್ವಲ್ಪಕಾಲ ಅಡಕಮಾಡಿಟ್ಟುಕೊಂಡಂತೆ-ಏಕತ್ವಾನು ಭವವನ್ನು ದಯಪಾಲಿಸುತ್ತಿರುವನು. ಅದೇ ಸುಷುಪ್ತಿಯು. ಆದರೆ ಈ ಜೀವನ

ಅಹಂಕಾರವು ಎಷ್ಟು ಮಿತಿಮೀರಿದೆಯೆಂದರೆ: ಸದ್‌ಬ್ರಹ್ಮದಲ್ಲಿ ಒಂದಾಗಿದ್ದಾಗಲೂ ತಾನು ಬೇರೆಯಾಗಿಯೇ ಇದ್ದೆನೆಂದೇ ಎಚ್ಚರದಲ್ಲಿ ಹಟಹಿಡಿದಿರುವನು. ಶ್ರುತಿ ಮಾತೆಯು 'ಈ ಹಟವನ್ನು ಬಿಡು, ನೀನು ಬ್ರಹ್ಮವೇ ; ನಿನ್ನಲ್ಲೇ ನೋಡಿಕೊ'- ಎಂದು ಕರುಣೆಯಿಂದ ಉಪದೇಶಿಸುತ್ತಿರುವಳು. ಇದನ್ನು ಕೇಳುವವರಾರು ?

ಈಗ ಸುಷುಪ್ತಿಯಲ್ಲಿ ಮಾತ್ರವೇ ಜೀವನಿಗೆ ಆಯಾಸವು ಪರಿಹಾರವಾಗಿ ಆನಂದಪ್ರಾಪ್ತಿಯು ಏಕೆ ಆಗುತ್ತದೆ? ಎಂಬಿದನ್ನು ವಿಚಾರಿಸೋಣ. ನಿಜವಾಗಿ ನೋಡಿದರೆ ಚೆನ್ನಾಗಿ ನಿದ್ರೆಮಾಡಿ ಎದ್ದುಬಂದವನಿಗೆ ಆಯಾಸಪರಿಹಾರ, ಉತ್ಸಾಹ ಚಟುವಟಿಕೆ, ಮಾನಸಿಕವಾಗಿ ಹೊಸತನ- ಗಳುಂಟಾಗುತ್ತಿರುವದು ಎಲ್ಲರ ಅನು ಭವದಲ್ಲಿದೆ. ಎಲ್ಲರೂ ಪ್ರತಿದಿನವೂ ಏನೇ ವ್ಯವಹಾರಗಳಲ್ಲಿದ್ದರೂ ಸ್ವಲ್ಪಸಮಯ ವಾದರೂ ನಿದ್ರೆಯನ್ನು ಬಯಸುತ್ತಾರೆ. ರಾತ್ರೆ ಕೆಲಸಮಾಡುವವರುಕೂಡ ಹಗಲಾದರೂ ನಿದ್ರೆಮಾಡಿಯೇ ತೀರುತ್ತಾರೆ. ಜನರಿಗೆ ತಿಳಿದೊ, ತಿಳಿಯದೆಯೊ, ನಿದ್ರೆಯು ಒಂದು ರೀತಿಯ ಅನಾಯಾಸವಾದ- ಆನಂದಸ್ಥಿತಿ ಎಂಬುದು ಸಾರ್ವತ್ರಿ ಕಾನುಭವಸಿದ್ಧವಾಗಿದೆ. ಹೀಗಿರುವಲ್ಲಿ ಈ ಆನಂದವನ್ನು ಬರವಣಿಗೆಯಿಂದ ತಿಳಿಸು ವದೇನಿದೆ? ಆದರೂ ಆ ಆನಂದದ ಕಡೆಗೆ ನಮ್ಮ ಲಕ್ಷ್ಯವನ್ನು ಹರಿಸುವದಕ್ಕಾಗಿ ಮುಂದುವರೆಯಬೇಕಾಗಿದೆ. ಪ್ರಕೃತ-ಜಗನ್ಮೂಲವಾದ ಸದ್ಬ್ರಹ್ಮವನ್ನೇ ಉಪನಿ ಷತ್ತುಗಳಲ್ಲಿ ವಿಜ್ಞಾನಾನಂದವೂ ಆಗಿದೆ-ಎಂದು ತಿಳಿಸಿದೆ. ಮತ್ತು ಆ ಬ್ರಹ್ಮವೇ ಎಲ್ಲರ ಆತ್ಮನೂ ಆಗಿದೆ- ಎಂಬ ತತ್ತ್ವವೇ ಸುಷುಪ್ತಿಯಲ್ಲಿ ಜೀವಾತ್ಮನು ಆಯಾಸ ಪರಿಹಾರದ ಮೂಲಕ ಆನಂದಪ್ರಾಪ್ತಿಯನ್ನು ಪಡೆಯುವದರ ಗುಟ್ಟಾಗಿದೆ. ವ್ಯವ ಹಾರದಲ್ಲಿ ಆನಂದ, ಸುಖ- ಎಂಬೀ ಶಬ್ದಗಳನ್ನು ನಾವು ಬಳಸುತ್ತೇವಾದರೂ ವಿಷಯೇಂದ್ರಿಯಗಳ ಸಂಪರ್ಕದಿಂದ ಲಭಿಸುವ ಸುಖಾಭಾಸವನ್ನೇ ಹಾಗೆ ಕರೆಯು ತ್ತೇವೆ. ಆದರೆ-ಹೇಗೆ ಅಶ್ವತ್ಥಾಮನಿಗೆ ಆತನ ತಂದೆಯಾದ ದ್ರೋಣನು ರಾಜ ಗುರುವಾಗಿ ಹಸುಗಳನ್ನು ಪಡೆದಮೇಲೆ ದೊರಕಿದ ನಿಜವಾದ ಹಾಲನ್ನು ಕುಡಿಯು ವದಕ್ಕೆ ಮುಂಚೆ ಅಕ್ಕಿಹಿಟ್ಟಿನ ನೀರೇ ಹಾಲೆನಿಸಿ ರುಚಿಯಾಗಿ ಕಂಡುಬಂದಿತ್ತೋ ಹಾಗೆ- **ಸುಷುಪ್ತಿಯ ನಿಮಿತ್ತ ದೊರಕಿದ ಪರಮಾನಂದದ ರುಚಿಯು ವೈದಿಕತಿಳಿವಳಿಕೆಯ ಮೂಲಕ ನಮ್ಮದಾಗುವವರೆಗೂ ವಿಷಯಾನಂದ ವನ್ನೇ ನಿಜವಾದ ಆನಂದವೆಂದು ನಾವು ಭ್ರಮಿಸಿರುತ್ತೇವೆ.** ಇರಲಿ. ನಾವು ಎಷ್ಟೇ ಹಟಹಿಡಿದರೂ ಸುಷುಪ್ತಿಯ ಅವಸ್ಥೆಯನ್ನಾಗಲಿ ಆಗ್ಗೆ ಸಂಭವಿಸುವ ಅದ್ವೈತಸ್ಥಿತಿಯನ್ನಾಗಲೀ ತಪ್ಪಿಸಿಕೊಳ್ಳಲಾಗುವದಿಲ್ಲ. ನಿದ್ರೆಯನ್ನೇ ಮಹಾ ಯೋಗಾದಿಸಾಧನಗಳಿಂದ ಗೆದ್ದಿದ್ದೇನೆ- ಎಂದು ಹೇಳುವವನು ಕೂಡ ಜೀವಮಾನ ದಲ್ಲಿ ಸ್ವಲ್ಪಕಾಲವಾದರೂ ನಿದ್ರೆಮಾಡಲೇಬೇಕಾಗುವದು. ಇನ್ನು ನಿರ್ವಿಕಲ್ಪ ಸಮಾಧಿಯಲ್ಲಿ ಕುಳಿತವರು ನಿದ್ರೆಯನ್ನು ಗೆದ್ದಿರುವರಲ್ಲವೆ? ಎಂದು ಕೇಳಬಹುದು. ನಿದ್ರೆಯನ್ನು ಗೆದ್ದರೇನು ? ಅವರು ಅದ್ವೈತಸ್ಥಿತಿಯಲ್ಲಿರುವದನ್ನು ಅಲ್ಲಗಳೆಯಲಾ ದೀತೆ? ಒಂದೇ ಅದ್ವೈತಸ್ವರೂಪವೇ ಸುಷುಪ್ತಿ- ಸಮಾಧಿ-ಮೂರ್ಛೆಗಳಲ್ಲಿಯೂ

ಇರುತ್ತದೆಯೆಂದು ಶ್ರೀಶಂಕರಾಚಾರ್ಯರು ಹೇಳಿರುವದನ್ನು ಕೇಳಿದ್ದೀರಷ್ಟೆ! ಆದ್ದರಿಂದ ಅವಸ್ಥೆಗಿಂತಲೂ ಅವಸ್ಥಾನುಭವವೇ ವಿಚಾರಣೀಯವಾಗಿರುವದರಿಂದ ನಮ್ಮ ಸ್ವರೂಪದ ಅರಿವಿಗೆ ಅವಸ್ಥೆಗಳು ದ್ವಾರಮಾತ್ರವೇ ಆಗಿರುತ್ತವೆ. ಹೀಗೆ ಅದ್ವಿತೀಯನಾಗಿರುವದೇ ಸುಷುಪ್ತಿಯಲ್ಲಿ ದೊರಕುವ ಆನಂದಕ್ಕೆ ಕಾರಣವಾಗಿರುತ್ತದೆ.

ಈಗ ಶ್ರುತಿಯು ಜಗನ್ಮೂಲವಾದ ಆನಂದವಸ್ತುವನ್ನು ಪ್ರಸ್ತಾಪಿಸಿ ಹೀಗೆನ್ನುತ್ತಿದೆ. "ಎಲೈ ಸೋಮ್ಯನೆ, ಜೀವರುಗಳೆಲ್ಲರೂ ಆನಂದದಿಂದ ಬಂದಿರುವದರಿಂದಲೇ ಆನಂದಮೂಲವನ್ನು ಪಡೆಯಲು ತವಕಿಸುತ್ತಿದ್ದಾರೆ; ನೀನು ಅನ್ನಮಯಶರೀರಿಯಾದ ಜೀವನಾಗಿರುವೆ. ನಿನ್ನ ಜೀವನಾಧಾರವಾದ ಅನ್ನಕ್ಕೇನು ಕಾರಣ? ಅದಕ್ಕೇನು ಕಾರಣ? ಎಂದು ಹುಡುಕುವವನಾಗು; ಕಡೆಯಲ್ಲಿ ಸತ್ತೇ ಎಲ್ಲಕ್ಕೂ ಕಾರಣವೆಂದು ತಿಳಿಯಲಿದೆ. ಏಕೆಂದರೆ ಮಗು, ಈ ಪ್ರಜೆಗಳೆಲ್ಲರೂ ಸತ್ತಿನಿಂದಲೇ ಬಂದಿರುವರು; ಅದರಲ್ಲಿಯೇ ಪ್ರತಿಷ್ಠೆ (ನೆಲೆ)ಯುಳ್ಳವರಾಗಿರುವರು" ಹೀಗೆ ಉಪದೇಶಮಾಡಿದ ಅನಂತರ ಜಗನ್ಮೂಲವನ್ನು ಆತ್ಮನೆಂದೇ ಮತ್ತೊಮ್ಮೆ ಪ್ರಸ್ತಾಪಿಸಿ ಹೀಗೆಂದಿದೆ: "ಅದು ಸತ್ಯವು; ಅದು ಆತ್ಮನು; ಅದೇ ನೀನು" (ತತ್ತ್ವಮಸಿ) ಎಂಬುದು ಶ್ರುತಿಯ ಉಪಸಂಹಾರವಾಗಿದೆ.

ವಾಚಕರೆ, ಕಾರ್ಯಕಾರಣಪ್ರಕ್ರಿಯೆಯನ್ನೂ ಅವಸ್ಥಾತ್ರಯಪ್ರಕ್ರಿಯೆಯನ್ನೂ ಅಧ್ಯಾರೋಪಮಾಡಿಕೊಂಡು ಶ್ರುತಿಯು ಉಪದೇಶಿಸಿರುವ ಪ್ರತ್ಯಗಾತ್ಮಬೋಧವನ್ನು ಮನದಂದುಕೊಳ್ಳಿರಿ. ಶ್ರುತಿಯು ಉದ್ದಾಲಕಶ್ವೇತಕೇತುಗಳ ಸಂವಾದವನ್ನು ಮುಂದುವರೆಸಿ ಇನ್ನೂ ಎಂಟುಬಾರಿ "ತತ್ತ್ವಮಸಿ" ಎಂದು ಮುಂದೆ ಉಪದೇಶಿಸಲಿದೆ. ನಿಜವನ್ನು ಮನಗಾಣಿಸುವದಕ್ಕಾಗಿ ಪುನರುಕ್ತಿಯನ್ನು ಕೂಡ ಲೆಕ್ಕಿಸದೆ ಶ್ರುತಿಯು ಆದರದಿಂದ ಬ್ರಹ್ಮೋಪದೇಶವನ್ನು ಕೈಗೊಂಡಿದೆ. ಅದು ಮೊದಲು ಕಾರ್ಯಕಾರಣಪ್ರಕ್ರಿಯೆಯನ್ನು ಅಂಗೀಕರಿಸಿದ್ದೇಕೆಂದರೆ: ನಿತ್ಯಶುದ್ಧಬುದ್ಧಮುಕ್ತಸ್ವಭಾವವಾದ ಬ್ರಹ್ಮವನ್ನು ತಿಳಿಯಬೇಕಾದರೆ ಜಗತ್ತನ್ನು ನೆಪಮಾಡಿಕೊಂಡು ಅದಕ್ಕೆ ಮೂಲವನ್ನು ಹುಡುಕುವ ಮೂಲಕ ಬ್ರಹ್ಮಪ್ರತಿಪತ್ತಿಯನ್ನು ಜಿಜ್ಞಾಸುವಿಗೆ ಮಾಡಿಸೋಣವೆಂಬಿದೇ ಉದ್ದೇಶವಾಗಿದೆ. ಆದರೆ ಬ್ರಹ್ಮವನ್ನಂತು ಕೊಳ್ಳಬೇಕಾದ ಜಿಜ್ಞಾಸುವು ಅದನ್ನು ಪರೋಕ್ಷವಾಗಿ ಅರಿತುಕೊಂಡುಬಿಟ್ಟರೆ ತಪ್ಪಾಗಿಬಿಡುವದು. ಹಾಗಾಗದಿರಲೆಂದು ಬ್ರಹ್ಮವನ್ನು ಆತ್ಮನೆಂದೇ ತಿಳಿಸಿದ್ದಾಯಿತು. ಆತ್ಮಾನುಭವವು ಪ್ರಸಿದ್ಧವಾದರೂ ಅಜ್ಞಾನಿಗಳ ದೃಷ್ಟಿಯಿಂದ ಜೀವಾತ್ಮಾನುಭವವೇ ಹೆಚ್ಚು ಪ್ರಚುರವಾಗಿರುವದರಿಂದ ದ್ವೈತದಲ್ಲಿ ತಿಳುವಳಿಕೆಯು ನಿಂತುಬಿಟ್ಟರೆ ಮತ್ತೆ ಅನರ್ಥವೇ ಆಗಿಬಿಡುವದು. ಅದಕ್ಕಾಗಿ ಸುಷುಪ್ತಿಯನ್ನುದಾಹರಿಸಿ ಅಲ್ಲಿರುವಂತೆ ಅದ್ವೈತಾನುಭವವನ್ನು ಮನಗಾಣಿಸಿಕೊಟ್ಟು "ಅದೇ ಆತ್ಮನು ಅದೇ ಸತ್ಯವು ಅದೇ ನೀನು" ಎಂದು ತಿಳಿಸಬೇಕಾಗಿ ಬಂತು. ಆದರೂ ಜಿಜ್ಞಾಸುವಿಗೆ "ಸುಷುಪ್ತಿಯಲ್ಲಿ ನಾನು ಬ್ರಹ್ಮವನ್ನೇ ಸೇರಿದ್ದಲ್ಲಿ ಹಾಗೆಂತ ಏಕೆ ಗೊತ್ತಾಗುವದಿಲ್ಲ?" ಎಂದು ಏಳಬಹುದಾದ ಸಂಶಯಕ್ಕೆ ಮುಂದೆ ಉತ್ತರಿಸಲಾಗುವದು.

---

# ಸಾಮಾನ್ಯನೀತಿ

**ಗಂಧಃ ಸುವರ್ಣೇ ಫಲಮಿಕ್ಷುದಂಡೇ**
**ನಾಕಾರಿ ಪುಷ್ಪಂ ಖಲು ಚಂದನೇಷು ।**
**ವಿದ್ವಾನ್ ಧನಾಢ್ಯೋ ನ ತು ದೀರ್ಘಜೀವೀ**
**ಧಾತುಃ ಪುರಾ ಕೋಽಪಿ ನ ಬುದ್ಧಿದೋಽಭೂತ್ ॥ ೧ ॥**

೧. ಚಿನ್ನದಲ್ಲಿ ಸುವಾಸನೆಯನ್ನೂ ಕಬ್ಬಿನಜಲ್ಲೆಯಲ್ಲಿ ಹಣ್ಣನ್ನೂ ಚಂದನದ ಮರದಲ್ಲಿ ಹೂವನ್ನೂ ಹಾಗೆಯೇ ವಿದ್ಯಾವಂತನೂ ಧನವಂತನೂ ಆದ ಮನುಷ್ಯನಲ್ಲಿ ದೀರ್ಘವಾದ ಆಯುಷ್ಯವನ್ನೂ ಬ್ರಹ್ಮನು ಸೃಷ್ಟಿಸಲಿಲ್ಲ. ಹಾಗೆ ಮಾಡೆಂದು (ಅವನಿಗೆ) ಬುದ್ಧಿ ಹೇಳುವವರು ಯಾರೂ ಇರಲಿಲ್ಲವೇನೊ ?

**ಕಿಮಿಷ್ಟಮನ್ನಂ ಖರಸೂಕರಾಣಾಂ**
**ಕಿಂ ರತ್ನಹಾರೋ ಮೃಗಪಕ್ಷಿಣಾಂ ಚ ।**
**ಅಂಧಸ್ಯ ದೀಪೋ ಬಧಿರಸ್ಯ ಗೀತಂ**
**ಮೂರ್ಖಸ್ಯ ಕಿಂ ಶಾಸ್ತ್ರಕಥಾಪ್ರಸಂಗಃ ॥ ೨ ॥**

೨. ಕತ್ತೆ-ಹಂದಿಗಳಿಗೆ ಮೃಷ್ಟಾನ್ನವಾಗಲಿ, ಮೃಗಪಕ್ಷಿಗಳಿಗೆ ರತ್ನದ ಹಾರವಾಗಲಿ ಕುರುಡನಾದವನಿಗೆ ದೀಪವಾಗಲಿ, ಕಿವುಡನಾದವನಿಗೆ ಸಂಗೀತವಾಗಲಿ ಇಷ್ಟವಾಗುವದಿಲ್ಲ. ಹಾಗೆಯೇ ಮೂರ್ಖನಾದವನಿಗೆ ಶಾಸ್ತ್ರ-ಪುರಾಣ ಪ್ರವಚನಗಳು ಬೇಕೆನಿಸುವದಿಲ್ಲ.

**ಯೇ ಶಾಂತದಾಂತಾಃ ಶ್ರುತಿಪೂರ್ಣಕರ್ಣಾ**
**ಜಿತೇಂದ್ರಿಯಾಃ ಸ್ತ್ರೀವಿಷಯೇ ನಿವೃತ್ತಾಃ ।**
**ಪ್ರತಿಗ್ರಹೇ ಸಂಕುಚಿತಾಗ್ರಹಸ್ತಾಃ**
**ತೇ ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ ॥ ೩ ॥**

೩. ಯಾರು ಶಾಂತಿದಾಂತಿಗಳಿಂದ ಕೂಡಿದವರಾಗಿರುವರೋ ಯಾವಾಗಲೂ ಕಿವಿಗಳಲ್ಲಿ ವೇದಪಠನವನ್ನು ತುಂಬಿಕೊಂಡಿರುವರೋ ಜಿತೇಂದ್ರಿಯರೂ ಹೆಂಗಸರ ವಾರ್ತೆಯಿಂದ ಹಿಂದಿರುಗಿದವರೂ ಆಗಿರುವರೋ ದಾನವನ್ನು ತೆಗೆದುಕೊಳ್ಳುವದರಲ್ಲಿ ಮೋಟುಗೈಯವರಾಗಿರುವರೋ (ನಿವೃತ್ತರೋ) ಅಂಥ ಬ್ರಾಹ್ಮಣರು ಮಾತ್ರವೇ ಲೋಕವನ್ನು ಕಾಪಾಡುವದರಲ್ಲಿ ಸಮರ್ಥರಾಗಿರುವರು.

**ಕೋ ದೇಶಃ ಕಾನಿ ಮಿತ್ರಾಣಿ ಕಃ ಕಾಲಃ ಕೌ ವ್ಯಯಾಗಮೌ ।**
**ಕಶ್ಚಾಹಂ ಕಾ ಚ ಮೇ ಶಕ್ತಿರಿತಿ ಚಿಂತ್ಯಂ ಮುಹುರ್ಮುಹುಃ ॥ ೪ ॥**

೪. ದೇಶವು ಯಾವದು ? ನಾನು ಯಾರು ? ನನ್ನ ಮಿತ್ರರು ಯಾರು ? ನನ್ನ ಆದಾಯವ್ಯಯಗಳೇನು ? ನನ್ನ ಶಕ್ತಿಯೆಷ್ಟು ? ಸಮಯವಾವುದು ? ಎಂದು ಮತ್ತೂ ಮತ್ತೂ ಆಲೋಚಿಸುತ್ತಿರಬೇಕು.

---

# ಸತ್ಯಕಾಮನ ಪತ್ರಗಳು

## ಆಧಿವ್ಯಾಧಿಗಳಿಂದ ಬಿಡುಗಡೆ

"ನಾನೊಬ್ಬ ಎಂಜಿನೀಯರು ; ಸರ್ಕಾರಿ ಕೆಲಸದಲ್ಲಿದ್ದೇನೆ. ಬಹಳವರ್ಷಗಳಿಂದಲೂ ನನಗೆ ದೈಹಿಕವಾಗಿ ಕೆಲವು ಕೊರತೆಗಳಿದ್ದವು. ಒಂದುಬಾರಿ ಆಪರೇಷನ್ ಸಹ ಆಗಿತ್ತು. ಈಚೆಗೆ ನನಗೊಬ್ಬ ಎಂಜಿನಿಯರ್ ಮಿತ್ರರು ದೊರೆತರು. ಅವರ ನಡೆನುಡಿಗಳು ನನಗೆ ತುಂಬ ಮೆಚ್ಚಾಗಿದ್ದು ಅವರು ಪ್ರಾರಂಭಿಸಿದ್ದ ಒಂದು ಉದ್ಯೋಗಕ್ಕೆ ನಾನು ಬಂಡವಾಳವನ್ನೂ ಕೊಟ್ಟೆನು. ಆದರೆ ಅದೇಕೊ, ಕೆಲವು ಕಾಲಾನಂತರ ನಮ್ಮಿಬ್ಬರ ಸ್ನೇಹವು ಬತ್ತಿಹೋಗಿ ನನ್ನ ಹಣವೂ ಈಗ ಅವರಲ್ಲಿ ಸಿಕ್ಕಿಹಾಕಿಕೊಂಡಿದೆ. ಈ ಮನೋವ್ಯಥೆಯೂ ಈಗ ನನ್ನನ್ನು ಪೀಡಿಸುತ್ತಿದೆ. ನನ್ನ ಆರೋಗ್ಯವು ಈಗ ಸರ್ಕಾರಿಸೇವೆಯಲ್ಲಿ ಕೂಡ ಮುಂದುವರಿಯಲಾರದಷ್ಟು ಹದಗೆಟ್ಟಿದೆ. ಹಾಗೆಯೇ ಹಣದ ಚಿಂತೆಯೂ ಕಾಡಿಸುತ್ತಿದೆ. ನಾನು ಈ ಆಧಿವ್ಯಾಧಿಗಳಿಂದ ಪಾರಾಗುವ ಬಗೆ ಹೇಗೆ ಎಂಬುದನ್ನು ತಿಳಿಸಬಲ್ಲಿರಾ?" ಎಂದು ಕೇಳಿ ನೀವು ಬರೆದ ಪತ್ರವು ಬಂದಿದೆ.

ನೀವು ಶಾರೀರಕವಾಗಿ ದುರ್ಬಲರಾಗಿರುವದು ಚೆನ್ನಾಗಿ ನಿಮಗೆ ತಿಳಿದಿದ್ದಾಗಲೇ ನಿಮ್ಮ ಲೌಕಿಕವ್ಯವಹಾರಗಳನ್ನು ಪರಿಮಿತವಾಗಿ ಇರಿಸಿಕೊಳ್ಳಬೇಕಾಗಿತ್ತು. ಏಕೆಂದರೆ ಮನುಷ್ಯನಿಗೆ ಸಂಭವಿಸುವ ರೋಗಗಳಲ್ಲಿ ಆಗಂತುಕ, ಪ್ರಾರಬ್ಧ-ಎಂದು ಎರಡು ಪಂಗಡಗಳು ಇರುತ್ತವೆ. ಆಗಂತುಕವಾದರೆ ಔಷಧೋಪಚಾರಗಳಿಂದ ಹೋಗಿಬಿಡುತ್ತದೆ. ಪ್ರಾರಬ್ಧವಾದರೆ ಅನುಭವಿಸಿಯೇ ತೀರಿಸಬೇಕು. ರೋಗರುಜಿನಾದಿಗಳು ಪ್ರಾರಂಭವಾದ ಕೆಲವೇ ಸಮಯದಲ್ಲಿ ಅವು ಎಂಥವೆಂಬುದನ್ನು ಗೊತ್ತುಪಡಿಸಿಬಿಡಬಹುದು. ಪ್ರಾರಬ್ಧವೇ ಎಂದು ನಿಶ್ಚಯವಾದಮೇಲೆ ಮಾನಸಿಕವಾಗಿ ಅಶಾಂತಿಯನ್ನುಂಟುಮಾಡಬಹುದಾದಂಥ ಯಾವ ವ್ಯಾವಹಾರಿಕಜವಾಬ್ದಾರಿಯನ್ನೂ ಮೈಮೇಲೆ ಹಾಕಿಕೊಳ್ಳಬಾರದು. ರೋಗಗಳನ್ನು ಉಲ್ಲಂಘಿಸಿ (overcome) ಮಾನಸಿಕವಾಗಿ ಶಾಂತಿಯಿಂದಿರಬೇಕಾದರೆ ಆಧ್ಯಾತ್ಮವಿಚಾರಗಳು, ಸತ್ಸಂಗದ-ಹೊರತು ಬೇರೇನನ್ನೂ ಜೀವನದಲ್ಲಿ ಹಚ್ಚಿಕೊಳ್ಳಬಾರದು. ಆಧ್ಯಾತ್ಮಸಾಧನಗಳ ಬಲವಿದ್ದರೆ ಮಾತ್ರ-ಎಂಥ ರೋಗವೇ ಆಗಲಿ-ಮಾನವನನ್ನು ಸೋಲಿಸಲಾರದು. ಆದರೆ ಪ್ರಾರಬ್ಧಾನುಗುಣವಾಗಿ ಆಗಬಹುದಾದ ಬದಲಾವಣೆಗಳಿಗೆ ಯಾರೂ ಹೊಣೆಯಲ್ಲ. ದೇವರು ಕೂಡ ಆ ವಿಷಯಕ್ಕೆ ಅಸಹಾಯಕನೇ ಸರಿ. ಏಕೆಂದರೆ ಧರ್ಮಾತ್ಮರಾದ ಪಾಂಡವರಿಗೆ ಶ್ರೀಕೃಷ್ಣನೇ ಬೆಂಗಾವಲಾಗಿದ್ದರೂ ವನವಾಸ, ಜ್ಞಾತಿವಧೆ, ಕಷ್ಟನಷ್ಟಗಳನ್ನು ತಪ್ಪಿಸಲಾಗಲಿಲ್ಲ. ಆದರೇನು ? ಆ ಭಗವಂತನು ಜೊತೆಗೆ ಇದ್ದದ್ದರಿಂದಲೇ ಅವರು ದುರ್ಗಗಳೆಲ್ಲದರಿಂದಲೂ ಪಾರಾದರು. ಹಾಗೆಯೇ ಈಗಲೂ ನೀವು ಕೂಡ ಅಧ್ಯಾತ್ಮಬಲವನ್ನು ಭಗವಂತನ ನಿರಂತರಸ್ಮರಣೆಯಿಂದ ಬೆಳೆಯಿಸಿಕೊಳ್ಳುವದರಿಂದ ಶೇಷಾಯುಷ್ಯವನ್ನಾದರೂ ಆರಾಮವಾಗಿ ಕಳೆಯಬಹುದು. ಹಾಗೆ ನಿಮ್ಮ ಜೀವನವನ್ನು ಪರಿವರ್ತಿಸಿಕೊಳ್ಳಿರಿ.

ಇನ್ನು ನಿಮ್ಮ ಸ್ನೇಹಿತರ ವಿಷಯ. ಈಗಿನ ಕಾಲಕ್ಕೆ ಪ್ರಪಂಚದಲ್ಲಿ ಯಾರು ಸಜ್ಜನರು ? ಯಾರು ಮೋಸಗಾರರು ? ಎಂಬಿದೇ ತಿಳಿಯದಂತಾಗಿದೆ. ಅದರಲ್ಲಿಯೂ ಸಜ್ಜನರ ವೇಷದಲ್ಲಿರುವ ವಂಚಕರಿಂದ ಅಪಾಯವು ಹೆಚ್ಚೆಂದು ಹೇಳಬೇಕಾಗಿಲ್ಲ. ಇಂಥವರ ಸಹವಾಸವೇ ನಿಮಗೆ ಗಂಟುಬೀಳಬೇಕಾದರೆ ಇದೂ ನಿಮ್ಮ ಪ್ರಾರಬ್ಧವೆಂದೇ ಪರಿಗಣಿಸಬೇಕಾಗಿದೆ. 'ತೋರಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು ಹರ ಹರ'' ಎಂದು ನಳಮಹಾರಾಜನು ಕಾರ್ಕೋಟಕನಿಂದ ಕಚ್ಚಿಸಿಕೊಂಡಾಗ ಹಲುಬಿದಂತೆ-ಮಾನವನಿಗೆ ಪರೇಚ್ಛೆಯಿಂದ ಪ್ರಾರಬ್ಧವು ಉಲ್ಬಣವಾಗಿ ಬಂದು ತಗುಲಿಕೊಂಡರೆ ಸಹಿಸಿಕೊಳ್ಳುವದೊಂದೇ ಗತಿ. ಕೌರವರೇ ಮೇಲೆ ಬಿದ್ದಾಗ ಪಾಂಡವರು ಯುದ್ಧಮಾಡದೆ ಗತಿಯುಂಟೆ ? ಆ ಯುದ್ಧದ ಫಲವನ್ನು ಉಪಭೋಗಿಸದೆ ಇರಲು ಸಾಧ್ಯವೆ ? ಇದೇ ಪರೇಚ್ಛಾಪ್ರಾರಬ್ಧವು. ಹಾಗೆಯೇ ನಿಮಗೂ ನಿಮ್ಮ ಸ್ನೇಹಿತರು ಭವಿಷ್ಯದಲ್ಲಿ ಹೆಚ್ಚಿನ ಲಾಭದ ಆಸೆಯನ್ನು ಮುಂದಿಟ್ಟಾಗ ನೀವೂ ಮನಸೋತು ಹಣವನ್ನು ತೊಡಗಿಸಿರಬಹುದು. ಆ ಹಣವು ಸತ್ಯವಾದ ನ್ಯಾಯವಾದ ಸಂಪಾದನೆಯೇ ಆಗಿದ್ದರೂ ನಿಮಗೆ ಅನುಭವಿಸುವ ಯೋಗವು ಬರುವವರೆಗೂ ಪರಾಧೀನವಾಗಿಯೇ ಅದು ಬಿದ್ದಿರಬೇಕಾಗಬಹುದು. ಸುಭಾಷಿತಕಾರನು ಹೇಳುವಂತೆ ''ಪುಸ್ತಕ, ಹೆಂಗಸು, ಹಣ–ಇವು ಬೇರೊಬ್ಬರ ಕೈಸೇರಿಬಿಟ್ಟರೆ ಹೋದಂತೆಯೇ ಎಂದು ಭಾವಿಸಬೇಕು ; ಒಂದು ವೇಳೆ ಹಿಂದಿರುಗಿ ಬಂದರೆ ಹರಿದು ಮಾಸಲಾಗಿ, ಮಾನನಷ್ಟವಾಗಿ– ತುಂಡುತುಂಡಾಗಿ (ಭಾಗೆ ಭಾಗವಾಗಿ) ಕೈಸೇರೀತು"–ಎಂಬಿದು ಎಲ್ಲರಿಗೂ ತಿಳಿದಿದೆ. ಆದ್ದರಿಂದ 'ಅರ್ಥಮನರ್ಥಂ ಭಾವಯ' (ಹಣವನ್ನು ಪೀಡೆಯೆಂದೇ ತಿಳಿ) ಎಂದು ಶ್ರೀ ಶಂಕರರು ಹೇಳಿರುವಂತೆ ನಿಮ್ಮ ಮೇಲಿನ ಪೀಡೆಯು ತೊಲಗಿತು-ಎಂದೇ ಸದ್ಯಕ್ಕೆ ಸುಮ್ಮನಾಗಿಬಿಡಿರಿ. ಆತ್ಮೀಯಪತ್ರವ್ಯವಹಾರಗಳ ಮೂಲಕ ಅದು ಹಿಂತಿರುಗುವವರೆಗೆ ಭದ್ರಪಡಿಸಿಕೊಳ್ಳಿರಿ. ಮಾನಸಿಕವಾಗಿ ಮಾತ್ರ ಅದರಮೇಲಿನ ಅಭಿಮಾನವನ್ನೇ ಕೈಬಿಟ್ಟು ಅದನ್ನು ಪಡೆದುಕೊಂಡವನೇ ಉದ್ಧಾರವಾಗಲಿ ! ಎಂದು ಹರಸಿಬಿಡಿರಿ. ಇದರಿಂದ ಮನಶ್ಶಾಂತಿಯಾದರೂ ದಕ್ಕೀತು. ನನ್ನ ಹಿತವಚನವು ನಿಮಗೆ ಬೇಜಾರನ್ನು ಉಂಟುಮಾಡಿದ್ದರೆ ಕ್ಷಮಿಸಿರಿ.

ಇನ್ನುಮುಂದೆ ನೀವು ಅಧ್ಯಾತ್ಮಕ್ಷೇತ್ರವನ್ನು ಹೆಚ್ಚಾಗಿ ಜೀವನಕ್ಕೆ ಸಂಬಂಧಿಸಿಕೊಂಡು ಆರೋಗ್ಯರಕ್ಷಣೆಗೆ ತಕ್ಕಷ್ಟು ಏರ್ಪಾಡುಮಾಡಿಕೊಂಡು ''ಎಲೈ ಸೂರ್ಯಭಗವಂತನೆ, ನನ್ನ ಹೃದ್ರೋಗವನ್ನು ಹರಿಸು"– ಎಂದು ಪ್ರತಿದಿನವೂ ಬೆಳಗ್ಗೆ ಪ್ರಾರ್ಥಿಸಿರಿ. ಗಾಯತ್ರೀಜಪದಿಂದ ಚಿತ್ತಶುದ್ಧಿಯನ್ನು ಮಾಡಿಕೊಳ್ಳಿರಿ. ದೇವರು ನಿಮ್ಮನ್ನು ಸಂಕಟಗಳಿಂದ ಪಾರುಮಾಡುವನು.

---

# ಆರಿಸಿದ ಅರಳುಮೊಗ್ಗುಗಳು

( 'ಆನಂದವನ' ಮಹಾಸಂಪುಟದಿಂದ )

೧. ಮಹಾಸಾಗರದಂತೆ ಭವ್ಯವೂ ಗಂಭೀರವೂ ವಿಸ್ತಾರವೂ ಆಗಿರುವ ವೇದಸಾಹಿತ್ಯವು ಭಾರತೀಯರಿಗೆ ಅನಾದಿಕಾಲದಿಂದ ದೊರೆತಿರುವದು ಮಹಾ ಪುಣ್ಯದ ಫಲವೇ ಸರಿ. ಆದರೆ ಇದರ ಪ್ರಯೋಜನವನ್ನು ಅರಿತಿರುವವರು ಕಡಿಮೆ. ಕೆಲವರಂತೂ ಭಾರತೀಯರಾಗಿ ಹುಟ್ಟಿದ್ದರೂ ವೇದಸಾಹಿತ್ಯದ ಪ್ರಯೋಜನವೇನಿದ್ದೀತು? ಆವಶ್ಯಕತೆಯೇನಿದ್ದೀತು? ಎಂದು ಕೇಳುತ್ತಾ ಇದರಿಂದಲೇ ನಮ್ಮ ಅವನತಿಯಾಗಿದೆಯೆಂದು ಕೂಡ ದೂಷಿಸುತ್ತಿದ್ದಾರೆ. ಇಂಥವರಿಗೆ ಈ ವೇದಸಾಹಿತ್ಯವು ಒಳಗೊಂಡಿರುವ ಸನಾತನ ಹಾಗೂ ಲೋಕೋದ್ಧಾರಕವಾದ ಧರ್ಮತತ್ತ್ವಗಳ ತಿಳಿವಳಿಕೆಯಿಲ್ಲದಿರುವದೇ ಈ ದೂಷಣೆಗೆ ಕಾರಣವಾಗಿದೆ.

೨. ವೇದಸಾಹಿತ್ಯವು ಸಮಷ್ಟಿ ಮತ್ತು ವ್ಯಷ್ಟಿಜೀವನದ ಉನ್ನತಿಗಾಗಿ ಚತುರಾಶ್ರಮ ಚಾತುರ್ವರ್ಣ್ಯಪದ್ಧತಿಯನ್ನು ರೂಪಿಸಿದೆ. ಈ ವರ್ಣಾಶ್ರಮ ಪದ್ಧತಿಯಂಥ ಉತ್ಕೃಷ್ಟಸಾಮಾಜಿಕ-ರಾಜಕೀಯವ್ಯವಸ್ಥೆಯು ಜಗತ್ತಿನಲ್ಲಿ ಇನ್ನಾವುದೂ ಇಲ್ಲ. ಏಕೆಂದರೆ ಅವನವನ ವರ್ಣದ ಕರ್ಮಗಳನ್ನು ಅವನವನೇ ಮಾಡಬೇಕಾದ್ದರಿಂದಲೂ ಪರಧರ್ಮವು ಭಯಾವಹವೆಂದಿರುವದರಿಂದಲೂ ಉದ್ಯೋಗ ಕ್ಷೇತ್ರದಲ್ಲಿ ಸ್ಪರ್ಧೆಯಿರುವದಿಲ್ಲ. ಜೀವನವೃತ್ತಿಗಳ ಕಲೆಬೆರಕೆಯಾಗಲಿ, ಮುಂದೇನು? ಎಂಬ ಭಯವಾಗಲಿ ಇಲ್ಲ. ಜೊತೆಗೆ ಚತುರ್ವಿಧಪುರುಷಾರ್ಥಗಳನ್ನೂ ನಮಗೆ ನೀಡಿರುವ ವೇದದ ಕಾಲದ ಉತ್ತಮ ಜೀವನಾದರ್ಶಗಳು ಬೇರೊಂದು ವ್ಯವಸ್ಥೆಯಲ್ಲಿ ಈವರೆಗೂ ನಮಗೆ ಉಪಲಬ್ಧವಾಗಿಲ್ಲ.

೩. ವೇದದಲ್ಲಿ ಪ್ರತಿಪಾದಿಸಿರುವ ಯಜ್ಞದಾನತಪಸ್ಸುಗಳು ಮಾನವನ ಉದ್ಧಾರಕ್ಕೆ ಅತ್ಯಮೂಲ್ಯಸಾಧನಗಳೆನಿಸಿವೆ. ಯಜ್ಞತತ್ತ್ವವನ್ನವಲಂಬಿಸಿಯೇ ಈ ಸೃಷ್ಟಿವ್ಯಾಪಾರವೆಲ್ಲವೂ ಸಾಗಿದೆ. ವ್ಯಷ್ಟಿ- ಸಮಷ್ಟಿಜೀವನವು ಯಜ್ಞಮಯವಾದಾಗ ಜೀವನವು ಒಂದು ನಿರಂತರವಾದ ಹೋರಾಟವಾಗದೆ ಒಂದು ಯಜ್ಞಸತ್ರವಾಗಿ ಮಹೋತ್ಸವವೆನಿಸಿಬಿಡುತ್ತದೆ. ಮರಣವೇ ಅವಭೃಥವಾಗುತ್ತದೆ. ಜೀವನವು ದುಃಖಮಯವಾಗಿ ದುರಂತದಲ್ಲಿ ಪರಿಣಮಿಸಲು ನಮ್ಮಲ್ಲಿರುವ ಸ್ವಾರ್ಥ-ಸಂಕುಚಿತ ಪ್ರವೃತ್ತಿಗಳೇ ಕಾರಣವಾಗಿವೆ. ಈ ಪ್ರವೃತ್ತಿಗಳನ್ನು ತೊಡೆದುಹಾಕಲು ದಾನ ತತ್ತ್ವವು ಇಲ್ಲಿ ಪ್ರತಿಪಾದಿಸಲ್ಪಟ್ಟಿದೆ. ದಾನದಿಂದ ಮನುಷ್ಯನಲ್ಲಿ ತ್ಯಾಗಪ್ರವೃತ್ತಿಯು ತಲೆದೋರಿ ಮುಂದೆ ಅದು ಅಮೃತತ್ವವನ್ನು ಕೊಡುತ್ತದೆ. ದಾನತತ್ತ್ವದ ರಹಸ್ಯವನ್ನು ಅರ್ಥಮಾಡಿಕೊಂಡಂತೆಲ್ಲ ಔದ್ಯೋಗಿಕವ್ಯವಸ್ಥೆಯ ಅಸಂತುಷ್ಟಿಯೆಲ್ಲವೂ ನ್ಯಾಯವಾದರೀತಿಯಲ್ಲಿ ಪರಿಹಾರವಾಗುತ್ತದೆ. ಇಂಥ ಭವ್ಯವಾದ ವೇದ ವಾಙ್ಮಯವನ್ನು ನಾವು ಕಾಪಾಡಿಕೊಂಡುಹೋಗಿ ನಮ್ಮ ಮುಂದಿನ ಜನಾಂಗಕ್ಕೆ ಒಪ್ಪಿಸುವದು ನಮ್ಮ ಪವಿತ್ರಕರ್ತವ್ಯವೆಂಬುದನ್ನು ವಿಚಾರವಂತರು ಯಾರೂ ಅಲ್ಲಗಳೆಯಲಾರರು.

---

# ದ್ವೇಷಬುದ್ಧಿ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಮಾನವ, ಈ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ- ಇವುಗಳ ಗುಂಪನ್ನೇ ನೀನೆಂದುಕೊಂಡಿರುವೆಯಲ್ಲವೆ? ಇವುಗಳ ಯೋಗಕ್ಷೇಮಕ್ಕಾಗಿ ನೀನು ಎಷ್ಟು ಬವಣೆಪಡುತ್ತಿರುವೆ? ಎಷ್ಟು ಮಾಡಬಾರದ ಕೆಲಸಗಳನ್ನು ಮಾಡಿ ಬಿಡಬಾರದವುಗಳನ್ನು ಬಿಡುತ್ತಿರುವೆ?

ಈ ಶರೀರಾದಿಗಳ ಗುಂಪನ್ನು 'ನಾನು' ಎಂದುಕೊಂಡದ್ದರಿಂದಲೇ ಇದಕ್ಕೆ ಅನುಕೂಲರಾಗಿರುವವರನ್ನು ನೀನು ನನ್ನವರು-ಎನ್ನುತ್ತಿರುವೆ. ಇದಕ್ಕೆ ಪ್ರತಿಕೂಲವಾಗಿರುವವರಲ್ಲಿ ದ್ವೇಷಮಾಡುತ್ತಿರುವೆ. ಅಲ್ಲವೆ? ಆದರೆ ವಿಚಾರಮಾಡಿ ನೋಡು. ಈ ಶರೀರಾದಿಗಳಲ್ಲಿ ಯಾವದೊಂದಾದರೂ ಇದ್ದಂತೆ ಇರುವದೆ? ಇದಕ್ಕೆ ಅನುಕೂಲವಾದದ್ದು ಯಾವದಿದ್ದೀತು? ಪ್ರತಿಕೂಲವಾದದ್ದು ಯಾವದಿದ್ದೀತು?

ಈ ಶರೀರಾದಿಗಳ ನಿಮಿತ್ತದಿಂದ ನಮಗೆ ಕೇಡುಮಾಡಿದವರೆಂದೆಣಿಸಿ ಕೆಲವರನ್ನು ಹಗೆಮಾಡುತ್ತಿರುವೆಯಲ್ಲ! ಅವರು ನಿಜವಾಗಿಯೂ ನಿನಗೆ ಒಳ್ಳೆಯದನ್ನು ಮಾಡಿದ್ದಾರೆಯೊ? ಇಲ್ಲವೊ-ಎಂಬುದನ್ನಾದರೂ ಯೋಚಿಸಬೇಡವೆ?

ದ್ವೇಷಬುದ್ಧಿ-ಎಂಬುದು ಹುಲ್ಲುಬಣವೆಗೆ ಅಥವಾ ಹುಲ್ಲುಮನೆಗೆ ಸಿಡಿದುಬಿದ್ದ ಹೊತ್ತಿದ ಬೆಂಕಿಯ ಕಡ್ಡಿಯಂತೆ ಇರುತ್ತದೆ. ಅದು ಸ್ವಲ್ಪಸ್ವಲ್ಪವಾಗಿ ಹುಲ್ಲನ್ನು ಸುಡುತ್ತಾ ಹೋಗುತ್ತಿರುತ್ತದೆ. ಆ ಮನೆಯ ಮೂಳಿಗೆಯಲ್ಲಿ ಅಥವಾ ಆ ಬಣವೆಯಲ್ಲಿ ಹೊಗೆಯನ್ನು ಹೆಚ್ಚಿಸುತ್ತಾ ಹೋಗುತ್ತಿರುತ್ತದೆ. ಅದರಂತೆ ದ್ವೇಷಬುದ್ಧಿಗೆ ಅವಕಾಶವನ್ನು ಕೊಟ್ಟಮೇಲೆ ಅದು ನಿನ್ನನ್ನೇ ಸುಡುತ್ತಿರುತ್ತದೆ. ನಿನ್ನ ಬುದ್ಧಿಗೆ ಮಂಕಿನ ಹೊಗೆಯನ್ನು ಮುಚ್ಚಿ ಮಾಡಬಹುದಾದದ್ದು, ಮಾಡಬಾರದ್ದು, ನಿಜವಾದದ್ದು, ಸುಳ್ಳಾದದ್ದು- ಇವುಗಳ ತತ್ತ್ವವನ್ನು ಅರಿಯದಂತೆ ಅಡ್ಡಿಯನ್ನು ಮಾಡಿಬಿಡುತ್ತದೆ. ಇದನ್ನು ಮರೆಯದಿರು.

ಒಬ್ಬನನ್ನು ಒಳಗೆ ದ್ವೇಷಬುದ್ಧಿಯಿಂದ ಕಾಣುತ್ತಾ 'ನಿನ್ನನ್ನು ಕ್ಷಮಿಸಿಬಿಟ್ಟಿದ್ದೇನೆ' ಎಂದು ಹೊರಗೆ ಆಡುವ ಬೂಟಾಟಿಕೆಯ ಮಾತನ್ನು ಬಿಡು. ನಿನ್ನ ಅಂತರಂಗದಿಂದ ದ್ವೇಷದ ಲವಲೇಶವೂ ಇಲ್ಲದಂತೆ ಹೊರಗೆ ಹಾಕಿಬಿಡು.

ಪರಮೇಶ್ವರನನ್ನು "ದೇವ, ಇಂಥವನೊಬ್ಬನು ನನಗೆ ಕೆಟ್ಟದ್ದನ್ನು ಮಾಡಿರುತ್ತಾನೆ; ಅವನಿಗೆ ಒಳ್ಳೆಯ ಬುದ್ಧಿಯನ್ನು ಕೊಡು" ಎಂದು ಪ್ರಾರ್ಥನೆಮಾಡಿದ ಮಾತ್ರದಿಂದ ನೀನು ಸಾತ್ತ್ವಿಕನಾದೆ-ಎಂದು ತಿಳಿಯದಿರು. 'ದೇವ, ನಾನು ತಪ್ಪು ಮಾಡಿದ್ದು ಇವನನ್ನು ಹಗೆಮಾಡುತ್ತಿರುವೆನೋ ಏನೋ ತಿಳಿಯದು. ನನ್ನ ತಪ್ಪನ್ನು ನನಗೆ ತಿಳಿಸಿಕಾಪಾಡು' ಎಂದು ಹೃದಯಪೂರ್ವಕವಾಗಿ ಬೇಡಿಕೊ. ನಿನ್ನ ಅಂತರಂಗವು ಶುದ್ಧವಾದರೆ ನಿನಗೆ ಹಗೆಗಳು ಇರುವ ಸಂಭವವೇ ಇಲ್ಲ- ಎಂಬಿದನ್ನು ಮರೆಯದಿರು.

---

# ಪಶ್ಯೇಮ ಶರದಶ್ಶತಮ್

( ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು )

ಸೌರಸೂಕ್ತದ ೫ ೫-೧೦-೧೯ನೆಯ ಮಂತ್ರವನ್ನು ವಿಚಾರಮಾಡೋಣ-

**ಓಂ ॥ ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ ।**
**ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಮ್ ॥**

"ಆ ಪ್ರಸಿದ್ಧವಾದ ಎಲ್ಲವನ್ನೂ ಬೆಳಗುವ, ದೇವತೆಗಳಿಗೆ ಪ್ರಿಯವಾದ ನಿರ್ಮಲವಾದ ಸೂರ್ಯಮಂಡಲವು ಮೇಲೇರಿರುತ್ತದೆ. ಅದನ್ನು ನಾವು ನೂರು ವರ್ಷಗಳ ಕಾಲವೂ ನೋಡುತ್ತಿರೋಣ ; ಬದುಕಿರೋಣ" ಎಂದಭಿಪ್ರಾಯ.

ಹಿಂದಿನ ಮಂತ್ರದಂತೆಯೇ ಇಲ್ಲಿಯೂ ಸೂರ್ಯಮಂಡಲವನ್ನು ಸ್ತುತಿಸಿರುತ್ತದೆ. ಆ ಮಂಡಲವು ದೇವತೆಗಳಿಗೆ ಹಿತವಾಗಿದೆ ; ಪ್ರಿಯವಾಗಿದೆ. ಏಕೆಂದರೆ ಮಾರ್ತಾಂಡಮಂಡಲೋದಯವನ್ನು ಅನುಸರಿಸಿಯೇ ತಿಥಿ, ವಾರ, ನಕ್ಷತ್ರ, ಯೋಗ, ಕರಣ-ಗಳೆಂಬ ಪಂಚಾಂಗಗಳನ್ನು ಉಚ್ಚಾರಮಾಡಿ ದೇವತೆಗಳಿಗೆ ಉಪಚಾರಗಳು ಅರ್ಪಿಸಲ್ಪಡುವವು. ಪೂಜಾದಿಕೈಂಕರ್ಯಗಳು ನೆರವೇರುವವು. ಮತ್ತು ಮಂಡಲವು ಮೇಲಕ್ಕೇರಿದಂತೆಲ್ಲ ಪ್ರಾತಃ-ಸಂಗವ-ಮಧ್ಯಾಹ್ನ ಕಾಲಗಳನ್ನೂ ಪಶ್ಚಿಮಕ್ಕೆ ಇಳಿದಂತೆಲ್ಲ ಅಪರಾಹ್ನ-ಸಾಯಂಕಾಲಗಳನ್ನೂ ಗಣನೆಮಾಡಲಾಗುತ್ತದೆ. ಆಯಾ ಕಾಲಕ್ಕೆ ಸರಿಯಾಗಿ ದೇವ-ಪಿತೃ-ಮನುಷ್ಯರಿಗೆ ಹವಿರರ್ಪಣೆಯನ್ನೂ ಕರ್ಮಾನುಷ್ಠಾನವನ್ನೂ ಬಲ್ಲವರು ಮಾಡುವರು. ಇದೆಲ್ಲವೂ ಸೂರ್ಯಮಂಡಲದರ್ಶನದಿಂದಲೇ ಸಾಧ್ಯವಾಗುವದು. ಆದ್ದರಿಂದ ದೇವಹಿತ-ವೆಂದು ಸ್ತುತಿಸಲಾಗಿದೆ.

ಇಂಥ ಮಂಡಲವನ್ನು ನಾವು ನೋಡುತ್ತಾ ನೂರುವರ್ಷಗಳು ಬದುಕೋಣ ಎಂಬಿದು ಬಹಳ ಅರ್ಥಗರ್ಭಿತವಾಗಿದೆ. ಮನುಷ್ಯನ ಆಯುಸ್ಸು ನೂರುವರ್ಷಗಳೆಂಬಿದು ಒಂದು ಲೆಕ್ಕಾಚಾರ. ಇದನ್ನು ಶ್ರುತಿಯಲ್ಲಿಯೇ ಹೇಳಿದೆ. ಆದರೆ ನೂರು ಎಂಬಿದನ್ನು ಕರಾರುವಾಕ್ಕಾಗಿ ಹಿಡಿಯದೆ ಮುಂದುವರೆಯಿಸಲೂಬಹುದು. ಉಪನಿಷತ್ತಿನಲ್ಲಿ ಒಂದು ಕಡೆ ಪುರುಷನ ಆಯುಷ್ಯವನ್ನು (24+44+48) 116 ವರ್ಷಗಳೆಂದಿದೆ. ಜ್ಯೋತಿಷ್ಕರು 120 ವರ್ಷಗಳವರೆಗೂ ಹಿಗ್ಗಿಸಿದ್ದಾರೆ. ಹೇಗೇ ಆಗಲಿ, ಜೀವಿಸಿರುವಷ್ಟು ಕಾಲವೂ ನಾವು ಸೂರ್ಯಮಂಡಲದರ್ಶನವನ್ನು ಮಾಡುತ್ತಿರಬೇಕಾದರೆ ನಮಗೆ ಕಣ್ಣುಗಳು ಚೆನ್ನಾಗಿ ಕಾಣುತ್ತಿರಬೇಕು. ಅದು ಸೂರ್ಯನ ಅನುಗ್ರಹದಿಂದಲೇ ಸಾಧ್ಯವಾಗುತ್ತದೆ. ಹಾಗೆಯೇ ನಮ್ಮ ಉಳಿದ ಎಲ್ಲಾ ಇಂದ್ರಿಯಗಳೂ ದೇಹವೂ ಮನಸ್ಸೂ ನಿತ್ಯನೂತನವಾಗಿದ್ದು ಬದುಕಿರುವಷ್ಟು ಕಾಲವೂ ದೇವತಾರಾಧನೆಗೂ ಲೋಕಸೇವೆಗೂ ವಿನಿಯೋಗವಾಗಬೇಕಾದರೆ ವೇದಾತ್ಮನಾದ ಆದಿತ್ಯನ ಕೃಪೆಯು ತೀರ ಅಗತ್ಯವೆಂದು ಹೇಳಬೇಕಾಗಿಲ್ಲ. ಯಜುರ್ವೇದಿಗಳು ಇದೇ ಅರ್ಥದ ಮಂತ್ರವೊಂದನ್ನು ಮಾಧ್ಯಾಹ್ನಿಕ ಸಂಧ್ಯಾಕಾಲಕ್ಕೆ ಸೂರ್ಯಪ್ರಾರ್ಥನೆಯಾಗಿ ಬಳಸುವದನ್ನೂ ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು.

ಈಗ ಋಗ್ವೇದದ ೬-೭-೮-೧೧ನೆಯ ಮಂತ್ರವನ್ನು ನೋಡೋಣ.

**ಓಂ ॥ ಬಣ್ಮಹಾಂ ಅಸಿ ಸೂರ್ಯ ಬಳಾದಿತ್ಯ ಮಹಾಂ ಅಸಿ ।**
**ಮಹಸ್ತೇ ಸತೋ ಮಹಿಮಾ ಪನಸ್ಯತೇಽದ್ಧಾ ದೇವ**
**ಮಹಾನ್ ಅಸಿ ॥**

"ಎಲೈ ಸೂರ್ಯನೆ, ನೀನು ತೇಜಸ್ಸಿನಿಂದ ಹೆಚ್ಚಿನವನಾಗಿರುವೆ ; ಇದು ನಿಜ. ಹಾಗೆಯೇ ಬಲಿಷ್ಠನೂ ಆಗಿರುವೆ. ನಿನ್ನ ಮಹಿಮೆಯು ಬಲ್ಲವರಿಂದ ಸ್ತುತಿಸಲ್ಪಡುತ್ತಿದೆ. ಎಲೈ ದೇವನೆ, ವೀರ್ಯದಿಂದಲೂ ನೀನು ಅಧಿಕನೆಂಬುದು ಸತ್ಯವೇ" ಎಂದಭಿಪ್ರಾಯ.

ಈ ಮಂತ್ರದಲ್ಲಿ ಸೂರ್ಯದೇವತೆಯನ್ನು ಪ್ರತ್ಯಕ್ಷವಾಗಿ ಕಂಡುಕೊಂಡ ಋಷಿಯು ಅವನನ್ನು ಹೊಗಳುತ್ತಿದಾನೆ. ಸೂರ್ಯನು ಎಲ್ಲರಿಗೂ ಪ್ರತ್ಯಕ್ಷನೇ ಅಲ್ಲವೆ? ಎಂದರೆ ಹಾಗಲ್ಲ. ಸೂರ್ಯಮಂಡಲವೂ ಅಲ್ಲಿಂದ ಹೊರಟಿರುವ ಕಿರಣಗಳೂ ಎಲ್ಲರಿಗೂ ಕಾಣುತ್ತಿದ್ದು ಅನುಭವದಲ್ಲಿರುವದು ನಿಜ. ಸೂರ್ಯನೊಬ್ಬನೇ ಏಕೆ? ಭೂಮಿ, ಚಂದ್ರ, ಜಲ, ಗಾಳಿ- ಎಲ್ಲವೂ ಸರ್ವಮಾನವರಿಗೂ ಗೋಚರವಾಗಿಯೇ ಇವೆ. ಆದರೆ ಆಯಾ ಅಭಿಮಾನಿದೇವತೆಗಳ ಸಾಕ್ಷಾತ್ಕಾರವು ಮಾತ್ರ ಎಲ್ಲರಿಗೂ ಆಗಿಲ್ಲ. ಹಾಗೆ ಆಗಿದ್ದರೆ, ದೇವತೆಯ ಅರಿವು ಅಂತಃಕರಣದಲ್ಲಿ ಮೂಡಿದ್ದರೆ- ಮನುಷ್ಯನು ಇಷ್ಟೊಂದು ಪಾಪಗಳನ್ನು ಎಂದಿಗೂ ಮಾಡುತ್ತಿರಲಿಲ್ಲ. ಆದ್ದರಿಂದ ಋಷಿಗಳಾದವರಿಗೆ ಮಾತ್ರವೇ ದೇವತಾಸಾಕ್ಷಾತ್ಕಾರವೂ ದೇವತೆಗಳೊಡನೆ ವ್ಯವಹಾರವೂ ಸಿದ್ಧಿಸಿರುತ್ತದೆ. ಋಷಿ-ಎಂಬ ಶಬ್ದವೇ ಅತೀಂದ್ರಿಯವಾದ ಜ್ಞಾನವುಳ್ಳವನನ್ನು ಹೇಳುತ್ತದೆ. ನಾವೆಲ್ಲರೂ ಋಷಿಗಳ ವಂಶದವರೇ ಆದರೂ ದೇವತಾಜ್ಞಾನಸಾಕ್ಷಾತ್ಕಾರಗಳಿಲ್ಲದೆ 'ನುಷಿ' (ಕೀಟ)ಗಳಾಗಿದ್ದೇವೆ. ಈಗಲಾದರೂ ಋಷಿಗಳ ಸಂಸ್ಕೃತಿಯ ಕಡೆಗೆ ನಾವು ತಿರುಗಬೇಕು. ಪ್ರಕೃತ-ಜಮದಗ್ನಿ ಋಷಿಯು ಕಂಡುಕೊಂಡಿರುವ ಈ ಋಕ್ಕಿನಲ್ಲಿ ಸೂರ್ಯನನ್ನು ನೇರಾಗಿ ಸ್ತುತಿಸಿದೆ. ಸಂಬೋಧನಾವಿಭಕ್ತಿಪ್ರಯೋಗವು ಆತನ ದೇವತಾಜ್ಞಾನವನ್ನು ಎತ್ತಿಹಿಡಿಯುತ್ತಿದೆ. ಸೂರ್ಯನನ್ನು ತೇಜೋವಂತನೆಂದೂ ಬಲಿಷ್ಠನೆಂದೂ ವೀರ್ಯವಂತನೆಂದೂ ತಿಳಿಸುತ್ತಾ ಇದು ನಿಜ, (ಬಟ್) ಎಂದು ಋಷಿಯು ಎರಡುಬಾರಿ ಆಣೆಮಾಡಿ ಹೇಳುತ್ತಿದಾನೆ. ಹೀಗೆ ಹೇಳಬೇಕಾದರೆ ಅವನಿಗೆ ಆದಿತ್ಯನ ಯೋಗೈಶ್ವರ್ಯಶಕ್ತಿವಿಭೂತಿ ಮಹಿಮಾದಿಗಳು ಚೆನ್ನಾಗಿ ಮನದಟ್ಟಾಗಿರುವವೆಂಬುದರಲ್ಲಿ ಸಂಶಯವೇ ಇಲ್ಲ. ಆದಿತ್ಯನ ಮಹಿಮೆಯನ್ನು ಹೆಚ್ಚುಹೆಚ್ಚಾಗಿ ನಾವು ಅನುಸಂಧಾನಮಾಡಿಕೊಳ್ಳಬೇಕಾದರೆ ಶ್ರೀಮದ್ರಾಮಾಯಣಾಂತರ್ಗತವಾದ 'ಆದಿತ್ಯಹೃದಯ' ಸ್ತೋತ್ರವನ್ನೂ ಸೂರ್ಯನಮಸ್ಕಾರಪೂಜಾವಿಧಿಗಳಲ್ಲಿ ಅಡಕವಾಗಿರುವ ಪೌರಾಣಿಕಶ್ಲೋಕಗಳನ್ನೂ ಪಠನಮಾಡಬೇಕು. ಅರ್ಥವಿಚಾರವನ್ನೂ ಮಾಡಬೇಕು. ಆಗ ಆದಿತ್ಯದೇವತೆಯಲ್ಲಿ ನಮಗೆ ಭಕ್ತಿಶ್ರದ್ಧೆಗಳು ಸಹಜವಾಗಿಯೇ ಉಂಟಾಗಲಿವೆ.

ಈಗ ೬-೭-೮-೧೨ನೆಯ ಮಂತ್ರವನ್ನು ನೋಡೋಣ :

**ಓಂ ॥ ಬಣ್ ಸೂರ್ಯ ಶ್ರವಸಾ ಮಹಾನ್ ಅಸಿ ಸತ್ರಾ ದೇವ**
**ಮಹಾನ್ ಅಸಿ । ಮಹ್ನಾ ದೇವಾನಾಮಸುರ್ಯಃ**
**ಪುರೋಹಿತೋ ವಿಭು ಜ್ಯೋತಿರದಾಭ್ಯಮ್ ॥**

"ಎಲೈ ಸೂರ್ಯನೆ, ನೀನು ಶ್ರವಣದಿಂದ ಹಿರಿಯನಾಗಿರುವೆ, ಎಲೈ ದೇವನೆ, ದೇವತೆಗಳ ನಡುವೆ ನೀನು ಹೆಚ್ಚಿನವನಾಗಿರುವೆ. ರಾಕ್ಷಸರನ್ನು ಸಂಹರಿಸುವವನೂ ಆಗಿರುವೆಯಷ್ಟೆ. ಹಾಗೂ ದೇವತೆಗಳಿಗೆ ಹಿತೋಪದೇಶವನ್ನು ನೀಡುವವನಾಗಿರುವೆ; ನಿನ್ನ ಜ್ಯೋತಿಯು ಯಾರೊಬ್ಬರಿಂದಲೂ ಹಿಂಸೆಮಾಡಲಾಗದ್ದಾಗಿರುವದು" ಎಂದು ಅಭಿಪ್ರಾಯ.

ಈ ಮಂತ್ರದಲ್ಲಿಯೂ ಋಷಿಯು ಸೂರ್ಯನ ಹೆಚ್ಚುಗಾರಿಕೆಯನ್ನು ತಿಳಿಸಿದ್ದಾನೆ. ಆತನು ಶ್ರವಣದಲ್ಲಿ ಹಿರಿಯನು- ಎಂದರೆ ಪ್ರಜಾಪತಿರೂಪನಾಗಿ ಬ್ರಹ್ಮವಿದ್ಯೆಯನ್ನು ಪರಮಾತ್ಮನಿಂದ ಮೊದಲು ಪಡೆದುಕೊಂಡವನು. 'ಭಗವಂತನು ಹಿರಣ್ಯಗರ್ಭನನ್ನು ಉಂಟುಮಾಡಿ ಅವನಿಗೆ ವೇದಗಳನ್ನು ಅನುಗ್ರಹಿಸಿದನು' ಎಂದು ಉಪನಿಷತ್ತಿನಲ್ಲಿದೆ. ಗೀತೆಯಲ್ಲಿಯೂ 'ಇಮಂ ವಿವಸ್ವತೇ ಯೋಗಮ್' ಎಂಬ ಶ್ಲೋಕದಲ್ಲಿ ಅಧ್ಯಾತ್ಮಯೋಗವನ್ನು ಸೃಷ್ಟಿಯ ಆದಿಯಲ್ಲಿ ಭಗವಂತನು ಸೂರ್ಯನಿಗೆ ಪ್ರಪ್ರಥಮವಾಗಿ ಉಪದೇಶಿಸಿದನು-ಎಂದೇ ಇದೆ. ಆದರಿಂದ ಈತನು ಶ್ರೋತೃಗಳಲ್ಲಿ ಹಿರಿಯನೆನಿಸಿರುವನು. ಆದ್ದರಿಂದಲೇ ದೇವತೆಗಳಲ್ಲಿ ಹೆಚ್ಚಿನವನಾಗಿರುವನು. ಹಿರಣ್ಯಗರ್ಭನ ಪುತ್ರನಾಗಿ ಅವತರಿಸಿರುವ ಈ ಅರ್ಕನು ಹಿಂದಿನ ಸೃಷ್ಟಿಯಲ್ಲಿದ್ದ, ಪಾಪಗಳನ್ನೆಲ್ಲ ಸುಟ್ಟುಬೂದಿಮಾಡಿಕೊಂಡು ಪವಿತ್ರರಾದ, ಜೀವರುಗಳ ನಡುವೆ ಪ್ರಥಮನಾಗಿರುವನು. ಆದ್ದರಿಂದಲೇ ಇವನಿಗೆ ಆದಿತ್ಯಪದವಿಯು ದೊರಕಿರುವದು. ಇನ್ನು ಈತನು ರಾಕ್ಷಸಸಂಹಾರಕನು ಹೇಗೆಂದರೆ : ಇವನ ಹಾಜರಿಯಲ್ಲಿ ರಾಕ್ಷಸರು ಕಾಣಿಸಿಕೊಳ್ಳುವದೇ ಇಲ್ಲ. ಅವರೆಲ್ಲ ನಿಶಾಚರರು (ರಾತ್ರಿಯಲ್ಲಿ ಸಂಚಾರಮಾಡುವವರು) ಎನಿಸಿರುವರು. ಸೂರ್ಯನು ಗೋಚರಿಸುವಷ್ಟು ಕಾಲವೆಲ್ಲವೂ ದೇವಪಿತ್ರಾದಿಪುಣ್ಯಜೀವಿಗಳಿಗೇ ವ್ಯವಹಾರಕ್ಕೆ ತಕ್ಕದ್ದಾಗಿರುವದು. ಹೀಗೆ ಸೂರ್ಯನು ಅಸುರರನ್ನೆಲ್ಲ ಹಿಮ್ಮೆಟ್ಟಿಸಿರುವನು. ಮತ್ತು ಈತನು ಒಂದು ರೀತಿಯಲ್ಲಿ ದೇವತೆಗಳಿಗೆ 'ಪುರೋಹಿತ'ನೆನಿಸಿರುವನು. ಅಗ್ನಿಯು ದೇವತೆಗಳ ಪುರೋಗಾಮಿಯಾಗಿದ್ದು ಹವಿಸ್ಸನ್ನು ತಂದು ತಲುಪಿಸುವದರಿಂದ ಪುರೋಹಿತನೆನಿಸಿದರೆ ಈತನು ದೇವತೆಗಳಿಗೆ ತತ್ತ್ವೋಪದೇಶವನ್ನು ನೀಡುವದರಿಂದ ಪುರೋಹಿತನಂತೆ ಹಿತಚಿಂತಕನಾಗಿರುವನು. ಸೂರ್ಯನೇ ಪ್ರಜಾಪತಿಯೆನಿಸಿರುವದರಿಂದ ಇವನಿಂದ ಇಂದ್ರ-ವಿರೋಚನರು ಆತ್ಮೋಪದೇಶವನ್ನು ಪಡೆದುಕೊಂಡದ್ದು, ಹಾಗೂ ಯಾಜ್ಞವಲ್ಕ್ಯರು ನೇರಾಗಿ ಈತನಿಂದ ಬ್ರಹ್ಮ(ವೇದ)ವನ್ನು ಪಡೆದುಕೊಂಡದ್ದು- ಸಹ ಪುರಾಣಪ್ರಸಿದ್ಧವಾಗಿದೆ. ಇನ್ನು ಈತನ ಬೆಳಕನ್ನು ಯಾರೂ ತಡೆಯಲಾರರು-ಪೀಡಿಸಲಾರರು- ಎಂಬುದೂ ಗೊತ್ತಿರುವ ವಿಷಯವು. ಅಷ

ರೂಪಕ್ಕೆ ರಾಹುಕೇತುಗಳು ಕೆಲವು ಘಳಿಗೆಗಳಕಾಲ ಗ್ರಹಣಕಾಲದಲ್ಲಿ ಈತನನ್ನು ಹಿಡಿಸಿದಂತೆ ಕಂಡರೂ ಆಗಲೂ ಪೂರ್ಣವಾಗಿ ಕತ್ತಲಾಗುವದಿಲ್ಲ. ಆದ್ದರಿಂದ ಸೂರ್ಯಜ್ಯೋತಿಯು ಅಪ್ರತಿಹತವಾಗಿರುವದು. ಇಂಥ ಸೂರ್ಯನನ್ನು ಋಷಿಯು ಇಲ್ಲಿ ಹೊಗಳಿರುತ್ತಾನೆ.

ಈಗ ೭-೮-೧೨-೧ನೆಯ ಮಂತ್ರವನ್ನು ವಿಚಾರಮಾಡೋಣ-

**ಓಂ ॥ ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ**
**ತದೃತಂ ಸಪರ್ಯತ । ದೂರೇದೃಶೇ ದೇವಜಾತಾಯ**
**ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ ॥**

"ಎಲೈ ಋತ್ವಿಜರುಗಳಿರಾ, ನೀವು ಮಿತ್ರಾವರುಣದೇವತೆಗಳನ್ನು ಕಂಡು ಕೊಂಡಿರುವ ಮಹಾದೇವನಾದ, ಹಾಗೂ ದೂರದಲ್ಲಿದ್ದರೂ ಕಾಣಿಸಿಕೊಳ್ಳುತ್ತಿರುವ, ದೇವತೆಗಳಿಗಾಗಿಯೇ ಹುಟ್ಟಿರುವ, ಜಗತ್ತಿಗೆಲ್ಲ ಜ್ಞಾನಪ್ರದನೂ ದ್ಯುಲೋಕ ಪುತ್ರನೂ ಆದ ಸೂರ್ಯನಿಗೆ ನಮಸ್ಕಾರಮಾಡಿ ಯಾಗಾದಿಕರ್ಮಗಳನ್ನು ಆಚರಿಸಿ ಆತನನ್ನು ಉಪಚರಿಸಿರಿ" ಎಂದರ್ಥ.

ಇಲ್ಲಿಂದ ಮುಂದಕ್ಕೆ ಹನ್ನೆರಡು ಋಕ್ಕುಗಳು ಪೂರ ಸೂರ್ಯನ ಸ್ತೋತ್ರ ರೂಪವಾಗಿವೆ. ಸೂರ್ಯನ ಮಗನೇ ಆದ 'ಅಭಿತಪಾ' ಎಂಬ ಋಷಿಯು ಇವುಗಳ ದ್ರಷ್ಟಾರನಾಗಿದ್ದಾನೆ. ದ್ವಾದಶಾದಿತ್ಯರನ್ನು ಕುರಿತು ಈ ದ್ವಾದಶಋಕ್ಕುಗಳು ಹೊರಟಿವೆ. ಇವುಗಳನ್ನು ಸೂರ್ಯೋದಯಕ್ಕೆ ಸ್ವಲ್ಪ ಮುಂಚೆಯೇ ಪಠನಮಾಡ ಲಾರಂಭಿಸಿ ಸೂರ್ಯೋದಯಸಮಯಕ್ಕೆ ಇಲ್ಲಿರುವ ನಾಲ್ಕನೆಯ ಮಂತ್ರವಾದ 'ಯೇನ ಸೂರ್ಯ ಜ್ಯೋತಿಷಾ' ಎಂಬಲ್ಲಿಂದ ಪಠಿಸುತ್ತಾ ವಾಗ್ಯತನಾಗಿ ಉಪಸ್ಥಾನ ಮಾಡಬೇಕೆಂದು ವೇದಭಾಷ್ಯಕಾರರು ತಿಳಿಸಿರುತ್ತಾರೆ. ಇಲ್ಲಿ ಸೂರ್ಯನು ಮಿತ್ರಾ ವರುಣರೆಂಬ ದೇವತೆಗಳನ್ನೂ ತನ್ನಲ್ಲಿ ಕಂಡುಕೊಂಡು- ಎಂದರೆ ಅರಿತುಕೊಂಡು ಆ ದೇವತೆಗಳಿಗೂ ಆತ್ಮನಾಗಿರುವನೆಂದೂ ದೇವತೆಗಳೆಲ್ಲರಿಗೂ ದೇವನೆನಿಸಿ ಮಹಾ ದೇವನೆಂದು ಹೊಗಳಲ್ಪಡುವನೆಂದೂ ತಿಳಿಸಿದೆ. ಮತ್ತು ಬಹುದೂರದಲ್ಲಿದ್ದರೂ ಎಲ್ಲರಿಗೂ ಈತನು ಕಾಣಿಸಿಕೊಳ್ಳುವದು ವಿಶೇಷವೇ ಸರಿ. ಏಕೆಂದರೆ ಆಕಾಶದಲ್ಲಿ ಕೆಲವೇ ಮೈಲುಗಳ ಎತ್ತರದಲ್ಲಿರುವ ವಸ್ತುವುಕೂಡ ನಮಗೆ ದೃಗ್ಗೋಚರವಾಗು ವದಿಲ್ಲ. ಹೀಗಿರುವಲ್ಲಿ ಲಕ್ಷಾಂತರ ಮೈಲುಗಳ ಎತ್ತರದಲ್ಲಿರುವ ಸೂರ್ಯನು ಎಲ್ಲರಿಗೂ ತಾನು ಸ್ಪಷ್ಟವಾಗಿ ಕಾಣಿಸಿಕೊಳ್ಳುವದರ ಜೊತೆಗೆ ನಮ್ಮೊಡನೆ ಭೂಮಿ ಯಲ್ಲಿರುವ ವಸ್ತುಗಳೂ ನಮಗೆ ಕಾಣಿಸುವಂತೆ ಬೆಳಗುತ್ತಾನೆಂದರೆ ಆತನ ಮಹಿಮೆ ಯನ್ನು ಹೇಳತಕ್ಕದ್ದೇನಿದೆ? ಇಂಥ ಸೂರ್ಯನು ದ್ಯುಲೋಕದಲ್ಲಿ ಕಾಣಿಸಿಕೊಳ್ಳು ವದರಿಂದ ದ್ಯುಲೋಕಪುತ್ರನೆಂದಿದೆ. ಜಗತ್ತಿನ ಜನರಿಗೆ ಈತನು ಲೌಕಿಕಪಾರ ಮಾರ್ಥಿಕಜ್ಞಾನವನ್ನೂ ಅಂತರಂಗಪ್ರೇರಕನಾಗಿ ನೀಡುತ್ತಿರುವನು. ಇಂಥವನಿಗೆ ನಿಮ್ಮ ಕರ್ಮಗಳನ್ನೆಲ್ಲ ಸಮರ್ಪಣೆಮಾಡಿರಿ- ಎಂದಭಿಪ್ರಾಯ.

---

# ಸಂಕ್ರಾಂತಿವ್ರತಗಳು

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು)

ಈಗ **ತಾಂಬೂಲಸಂಕ್ರಾಂತಿ**ಯನ್ನು ವಿಚಾರಮಾಡೋಣ. ಇದನ್ನು ತುಲಾಸಂಕ್ರಮಣದಿನದಿಂದ ಆರಂಭಿಸಿ ಒಂದು ವರ್ಷಕಾಲ ಮಾಡಬೇಕು. ಇಲ್ಲಿ ವಿಳ್ಳೆದೆಲೆಯನ್ನೇ ಸೂರ್ಯನೆಂದು ಭಾವಿಸಿ ಆವಾಹಿಸಿ ಪೂಜಿಸಬೇಕು. ವಿಳ್ಳೆದೆಲೆಯ ಸಂಖ್ಯೆಯು ಐದರಿಂದ ಆರಂಭವಾಗಿ ಏರುತ್ತಾಹೋಗಬಹುದು. ಮತ್ತು ಐದುಜನ ದಂಪತಿಗಳಿಗೆ ಈ ಪೂಜಿತತಾಂಬೂಲದಾನವನ್ನು ಮಾಡಬೇಕು. ಇದರೊಡನೆ ಅಡಿಕೆ, ಸುಣ್ಣಗಳನ್ನೂ ಇವುಗಳನ್ನು ಇಟ್ಟುಕೊಳ್ಳುವದಕ್ಕೆ ಸೌಕರ್ಯವಾಗುವಂತೆ ತಟ್ಟೆ-ಡಬ್ಬಿಗಳನ್ನೂ ಸಂಗ್ರಹಿಸಿಕೊಳ್ಳಬೇಕು. ವರ್ಷದಕೊನೆಯಲ್ಲಿ "ಸುವರ್ಣ ಕಮಲ" ವನ್ನು ಮಾಡಿಸಿ ವೀಳ್ಯೆಯದೆಲೆಗಳಿಂದ ಅದನ್ನು ಅಲಂಕರಿಸಿ ತಾಂಬೂಲ ಸಾಮಗ್ರಿಗಳನ್ನೆಲ್ಲ ಜೋಡಿಸಿ ಎಂದಿನಂತೆ ಪೂಜಿಸಿ ಬ್ರಾಹ್ಮಣದಂಪತಿಗಳಿಗೆ ಷಡ್ರಸೋಪೇತವಾದ ಭೋಜನವನ್ನು ಮಾಡಿಸಿ ತಾಂಬೂಲದಾನವನ್ನು ಮಾಡಬೇಕು. ಹೀಗೆ ಮಾಡಿದ ಸ್ತ್ರೀಯು ಯಜಮಾನರು, ಮಕ್ಕಳೊಡನೆ ಹಾಗೂ ಮೊಮ್ಮಕ್ಕಳೊಡಗೂಡಿ ಸುಖವನ್ನು ಹೊಂದುತ್ತಾಳೆ. ಯಾವದೇ ಪದಾರ್ಥವನ್ನು ನಾವು ಭೋಗಿಸಬೇಕಾದರೆ ಅದನ್ನು ಹಿಂದೆ ದಾನಮಾಡಿರಬೇಕು-ಎಂದಭಿಪ್ರಾಯ.

ಈಗ **ಮನೋರಥಸಂಕ್ರಾಂತಿ**ಯನ್ನು ವಿಚಾರಮಾಡೋಣ. ಇದು ಹೆಸರಿಗೆ ತಕ್ಕಂತೆ ಮನೋರಥಗಳನ್ನೆಲ್ಲ ಪೂರೈಸಲಿದೆ. ಇದನ್ನು ವೃಶ್ಚಿಕಸಂಕ್ರಮಣ ದಿಂದಾರಂಭಿಸಿ ಮುಂದುವರೆಸಬೇಕು. ಇಲ್ಲಿ ಬೆಲ್ಲವು ಮುಖ್ಯವಸ್ತುವಾಗಿರುತ್ತದೆ. ಅದನ್ನು ಒಂದು ಕೊಡದಲ್ಲಿ ತುಂಬಿಟ್ಟು ಆ ಕೊಡಕ್ಕೆ ವಸ್ತ್ರಾಲಂಕಾರಗಳನ್ನು ಜೋಡಿಸಿ ಅದರಲ್ಲಿ ಸೂರ್ಯನನ್ನು ಆವಾಹಿಸಿ ಪೂಜಿಸಬೇಕು. ಬೆಲ್ಲವು ಎಷ್ಟು ಇರಬೇಕೆಂಬುದಕ್ಕೆ ನಿಯಮವಿಲ್ಲ. ತನ್ನ ಶಕ್ತಿಗೆ ತಕ್ಕಂತೆ ಎಷ್ಟು ಹೆಚ್ಚಾಗಿಬೇಕಾದರೂ ದಾನಮಾಡಬಹುದು. ಬೆಟ್ಟದಷ್ಟು ದೊಡ್ಡ ರಾಶಿಯನ್ನು ಕೊಟ್ಟರೂ ಸಂತೋಷವೇ. ಸೂರ್ಯನ ಪ್ರೀತಿಗಾಗಿ ಸಂಕ್ರಾಂತಿಗಳಲ್ಲಿ ಮಾಡಬಹುದಾದ ದಾನಗಳಲ್ಲಿ ಬೆಲ್ಲವೂ ಸೇರಿದೆ. ಹೀಗೆ ವ್ರತಾನುಷ್ಠಾನವನ್ನು ಮಾಡಿದರೆ ಮಾನವನ ಸಕಲ ಮನೋರಥಗಳೂ ಕೈಗೂಡುವವು-ಎಂದು ತಿಳಿಸಿದ್ದಾರೆ.

ದಾನಮಾಹಾತ್ಮ್ಯವನ್ನು ಚೆನ್ನಾಗಿ ಬಲ್ಲ ಜಾಣರು ಮನುಷ್ಯನಿಗೆ ವರ್ಷಕ್ಕೆ ಒಮ್ಮೆಯಾದರೂ ತಾನು ಉಪಯೋಗಿಸುವ ಪದಾರ್ಥಗಳನ್ನು ಶಾಸ್ತ್ರೀಯರೀತಿಯಿಂದ ತ್ಯಾಗಮಾಡಲೆಂದು ಈ ಬೇರೆಬೇರೆಯ ಸಂಕ್ರಾಂತಿಗಳಲ್ಲಿ ಹೇಳಿರುವ ಬೆಲ್ಲ, ಕಬ್ಬಿನಜಲ್ಲೆ, ತಾಂಬೂಲ, ಹಣ್ಣುಗಳು, ಕುಂಭ, ಎಳ್ಳು, ಕೊಬ್ಬರಿ- ಇತ್ಯಾದಿಗಳನ್ನೆಲ್ಲ ಒಟ್ಟಿಗೆ ಮಕರಸಂಕ್ರಾಂತಿಯಲ್ಲಿ ದಾನಮಾಡುವಂತೆ ಏರ್ಪಡಿಸಿದ್ದಾರೆ. ಈ ಎಲ್ಲಾ ಸಂಕ್ರಾಂತಿಗಳ ವಿವರವನ್ನು ಮನನಮಾಡುವವರಿಗೆ ಮಕರಸಂಕ್ರಾಂತಿಯ ದಾನದ ಗುಟ್ಟು ಮನವರಿಕೆಯಾಗಲಿದೆ.

——— ———

# ಗುರುಶಿಷ್ಯಸಂವಾದ

(ಸಂಪಾದಕರು)

**ಶಿಷ್ಯ :** ಗುರುಗಳೆ, ಹೋಮಮಾಡುವಾಗ ಅಗ್ನಿಯು ಹೇಗಿರಬೇಕು ?

**ಗುರು :** ಕೇಳು. ಚೆನ್ನಾಗಿ ಒಣಗಿದ ಕಟ್ಟಿಗೆಯನ್ನು ಹಾಕಿ ಬೆಂಕಿಯನ್ನು ಪ್ರಜ್ವಲನಗೊಳಿಸಿ ಹೊಗೆಯು ಇಲ್ಲದಿರುವಂತೆಯೂ ಕೆಂಡಗಳು ಧಗಧಗಿಸುತ್ತಿರುವಾಗಲೂ ಹೋಮಮಾಡಬೇಕು. ಹಾಗಿಲ್ಲದಿರುವಾಗ ಮಾಡಬಾರದು.

**ಶಿಷ್ಯ :** ಅಗ್ನಿಯಲ್ಲಿ ಹೋಮಮಾಡುತ್ತಿರುವಾಗ ಸೌದೆಗಳ ತುದಿಯಿಂದ ಬೆಂಕಿಯನ್ನು ಕೆದಕಬಹುದೆ?

**ಗುರು :** ಕೂಡದು. ಹಾಗೆ ಮಾಡಿದರೆ ಪ್ರಾಯಶ್ಚಿತ್ತವುಂಟು. ಆದ್ದರಿಂದಲೇ ಹೋಮಾರಂಭಕ್ಕೆ ಮುಂಚೆಯೇ ಅಗ್ನಿಯನ್ನು ಯೌವನವಂತನಾದ ಪುರುಷನಂತೆ ಉದ್ದೀಪನಗೊಳಿಸಿರಬೇಕು. ನಡುನಡುವೆ ಹೋಮದ್ರವ್ಯಗಳು ಬಿದ್ದಂತೆಲ್ಲ ಕಟ್ಟಿಗೆಯನ್ನು ಹಾಕುತ್ತಿರಬಹುದು. ಆದರೆ ಅಗ್ನಿಯನ್ನು ತಿವಿಯಬಾರದು. ಹೇಗೆ ಊಟಮಾಡುವಾಗ ಬೇಗಬೇಗನೆ ತಿನ್ನುವಂತೆಯೂ ತಿಂದದ್ದು ಒಳಕ್ಕೆ ಹೋಗಲೆಂದೂ ಮನುಷ್ಯನನ್ನೇ ಎತ್ತಿ-ಭರ್ತಿಚೀಲವನ್ನು ಕುಕ್ಕುವಂತೆ-ಕುಕ್ಕಲಾಗುವದಿಲ್ಲವೋ ಹಾಗೆಯೇ ಅಗ್ನಿದೇವನನ್ನೂ ತಿಳಿಯಬೇಕು. ಆದರೆ ಕಡೆಯಲ್ಲಿ ಒಂದು ಬಾರಿ ಮಾತ್ರ ಅಗ್ನಿಯನ್ನು ಪ್ರಜ್ವಲನಗೊಳಿಸಲು ಸ್ವಲ್ಪ ಅಲುಗಾಡಿಸಬಹುದು.

**ಶಿಷ್ಯ :** ಹೋಮಮಾಡುವಾಗ ದ್ರವ್ಯಗಳು ಸ್ವಲ್ಪ ಹೊರಕ್ಕೆ ಚೆಲ್ಲಿದರೆ ಅವುಗಳನ್ನು ಎತ್ತಿಹಾಕಬಹುದೆ?

**ಗುರು :** ನಡುನಡುವೆ ಕೂಡದು. ಪ್ರಧಾನಾಹುತಿಗಳು ಪೂರೈಸಿ ಪ್ರಾಯಶ್ಚಿತ್ತಾಹುತಿಗಳನ್ನೂ ಕೊಟ್ಟಮೇಲೆ ಹಾಗೆ ಎತ್ತಿಹಾಕಬಹುದು. ಅದಕ್ಕೂ ಮಂತ್ರದಲ್ಲಿ ವಿನಿಯೋಗವನ್ನು ಕಲ್ಪಿಸಿದ್ದಾರೆ.

**ಶಿಷ್ಯ :** ಪೂರ್ಣಾಹುತಿ-ಎಂದರೇನು ?

**ಗುರು :** ಕೇಳು. ಇದು ಕರ್ಮದ ಕಡೆಯ ಭಾಗವು. ಕೆಲವು ಹೋಮಗಳಲ್ಲಿ "ವಸೋರ್ಧಾರಾ" ಎಂಬ ಹೋಮವೂ ಇರುತ್ತದೆ. ಹೇಗೆ ಇರಲಿ, ಪೂರ್ಣಾಹುತಿಯು ಕರ್ಮವನ್ನು ಪೂರ್ಣಗೊಳಿಸುತ್ತದೆ. ಈ ಆಹುತಿಯು ಅಧಿಕವಾಗಿದ್ದು ವಸ್ತ್ರ, ಫಲ, ಪುಷ್ಪದಕ್ಷಿಣಾದಿಗಳಿಂದ ಕೂಡಿರಬೇಕು. ಬಹಳ ಮಟ್ಟಿಗೆ ಯಜಮಾನನೊಬ್ಬನೇ ಪೂರ್ಣಾಹುತಿಯನ್ನರ್ಪಿಸಬೇಕು.

**ಶಿಷ್ಯ :** ಸಾಮೂಹಿಕಯಜ್ಞಗಳಲ್ಲಿ ಕೆಲವು ಭಕ್ತರುಗಳೂ ಸ್ವತಂತ್ರವಾಗಿ ಹೋಮಪದಾರ್ಥಗಳನ್ನು ನೇರಾಗಿ ಅಗ್ನಿಗೆ ಹಾಕುತ್ತಾರಲ್ಲ, ಸರಿಯೆ ?

**ಗುರು :** ಸರಿಯಲ್ಲ. ಭಕ್ತವೃಂದದವರಿಗೆ ಕುತೂಹಲವೊಂದೇ ನಿಮಿತ್ತವಾಗಿರುತ್ತದೆಯೇ ಹೊರತು ವಿಧಿಲೋಪದ ಕಡೆಗೆ ಗಮನವಿರುವದಿಲ್ಲ. ಮತ್ತು ಮಂತ್ರೋಚ್ಚಾರಣೆಯಾಗಲಿ, ಉದ್ದೇಶತ್ಯಾಗವಾಗಲಿ ತಿಳಿಯದೆ ಹಾಕಿದರೆ ಆ ದ್ರವ್ಯವು ವ್ಯರ್ಥವೇ ಸರಿ. ವಿಧಿಯಿಲ್ಲದೆ (ವಿಾರಿ) ಮಾಡಿದ್ದು ಮಾಡಿದಂತಲ್ಲ-ಎಂದೇ ಶಾಸ್ತ್ರದ ಕಟ್ಟಾಜ್ಞೆ ಇದೆ. ಒಟ್ಟಿನಲ್ಲಿ ಆಚಾರ್ಯನ ಅನುಮತಿಯಿಲ್ಲದೆ, ಏನನ್ನೂ ಅಗ್ನಿಗೆ ಹಾಕಬಾರದು. ಆಚಾರ್ಯನ ಮುಖಾಂತರ ಹಾಕಿಸಲು ಮಟ್ಟಿಗೆ ಅಡ್ಡಿಯಿಲ್ಲ.

**ಶಿಷ್ಯ :** ಹೋಮಮಾಡುವಾಗ ಎರಡುಸೌಟುಗಳನ್ನು ಇಟ್ಟುಕೊಂಡಿರುವರಲ್ಲ, ಅವು ಏನು ?

**ಗುರು :** ಕೇಳು. ವೈದಿಕಭಾಷೆಯಲ್ಲಿ ಅವುಗಳನ್ನು ಸ್ರುಕ್, ಸ್ರುವಗಳೆಂದು ಕರೆಯುವರು. ಸೌಟುಗಳಿಲ್ಲದಾಗ ಎರಡು ದುಂಡನೆಯ ಮುತ್ತುಗದ ಎಲೆಗಳನ್ನೂ ಬಳಸುತ್ತಾರೆ. ಗುರುತಿಗಾಗಿ ಚಿಕ್ಕದನ್ನು ಸ್ರುವವೆಂದೂ ದೊಡ್ಡದನ್ನು ಸ್ರುಕ್ ಎಂದೂ ಕರೆಯುತ್ತಾರೆ. ಆಹುತಿಗಳನ್ನು ನೀಡುವಾಗ ಪ್ರಧಾನ ಆಹುತಿಗಳನ್ನೂ ಸ್ವಿಷ್ಟಕೃತ್ ಎಂಬ ಹೋಮವನ್ನೂ ಸ್ರುಕ್‌ನಿಂದಲೇ ಕೊಡಬೇಕು. ಉಳಿದ ಆಹುತಿಗಳನ್ನು ಸ್ರುವದಿಂದ ಮಾಡಬೇಕು. ಚರು-ಮೋದಕ - ಕಬ್ಬು- ಸಮಿತ್ತು- ಮುಂತಾದ ಕಠಿಸದ್ರವ್ಯಗಳನ್ನು ಬರಿಯ ಕೈಗಳಿಂದಲೂ ಪಾಯಸ, ಹಾಲು, ತುಪ್ಪಗಳನ್ನು ದರ್ವೀ (ಚಮಚ) ದಿಂದಲೂ ಕೊಡಬೇಕು. ಒಟ್ಟಿನಲ್ಲಿ ಶಿಷ್ಟಾಚಾರಸಂಪನ್ನರು ಹೇಳಿದಂತೆಯೇ ನಡೆದುಕೊಳ್ಳಬೇಕು.

**ಶಿಷ್ಯ :** ಸಮಿತ್ತು ಎಂದರೇನು ?

**ಗುರು :** ಯಾವ ಸೌದೆಯ ಕಡ್ಡಿಗಳಿಂದ ಅಗ್ನಿಯು ಸಮಿದ್ಧ (ಉರಿಯುಳ್ಳವನು) ನಾಗುವನೋ ಅದನ್ನು ಸಮಿತ್ತು ಎನ್ನುವರು. ಆದರೆ ಅಗ್ನಿಯನ್ನು ಪ್ರಜ್ವಲನಗೊಳಿಸಲು ಉಪಯೋಗಿಸಬಹುದಾದ ಕಟ್ಟಿಗೆಯ ಕಡ್ಡಿಗಳೆಲ್ಲವೂ ಸಮಿತ್ತುಗಳಾಗುವದಿಲ್ಲ. ಶಾಸ್ತ್ರದಲ್ಲಿ ಕ್ರಮವಾಗಿ ನವಗ್ರಹಗಳಿಗೆ (೧) ಎಕ್ಕ (೨) ಮುತ್ತುಗ (೩) ಕಗ್ಗಲಿ (೪) ಉತ್ತರಣೆ (೫) ಅರಳಿ (೬) ಅತ್ತಿ (೭) ಬನ್ನಿ (೮) ಗರಿಕೆ (೯) ದರ್ಭೆ- ಈ ಒಂಭತ್ತನ್ನು ಸಮಿತ್ತುಗಳೆಂದು ಗೊತ್ತುಪಡಿಸಿದ್ದಾರೆ. ಸರ್ವಸಾಮಾನ್ಯವಾಗಿ ಅರಳಿ, ಗರಿಕೆ-ದರ್ಭೆಗಳನ್ನು ಎಲ್ಲಾ ರೀತಿಯಿಂದಲೂ ಸಮಿತ್ತುಗಳಾಗಿ ಬಳಸಬಹುದು.

**ಶಿಷ್ಯ :** ಸಮಿತ್ತುಗಳು ಹೋಮಕ್ಕೆ ತಕ್ಕಂತೆ ಎಷ್ಟು ಉದ್ದವಾಗಿರಬೇಕು ?

**ಗುರು :** ಎಲ್ಲಿ ಗೇಣುದ್ದವಿರಬೇಕೆಂದು ಹೇಳಿರುತ್ತಾರೋ ಅಂಥಲ್ಲಿ ಹೊರತು ಉಳಿದ ಸಂದರ್ಭದಲ್ಲಿ ಇಷ್ಟಾನುಸಾರ ತಕ್ಕಷ್ಟು ಉದ್ದವುಳ್ಳದ್ದಾಗಿರಬಹುದು. ಸಮಿತ್ತು, ಹಿಟ್ಟು, ಹೂವು, ಗರಿಕೆ, ಗೆಡ್ಡೆ-ಗಳನ್ನು ಕೈಯಿಂದಲೇ ಹೋಮಮಾಡಬೇಕು.

---

# ವಿಷಾನಿಲದುರಂತ

(ಪತ್ರಿಕಾಪಾಠಕ)

ಭೋಪಾಲ್‌ನಗರದ ಯೂನಿಯನ್ ಕಾರ್ಬೈಡ್ ಕಾರ್ಖಾನೆಯಲ್ಲಿ ಇತ್ತೀಚಿಗೆ ಸಂಭವಿಸಿದ ವಿಷಾನಿಲಸೋರಿಕೆಯ ದುರಂತದ ಪರಿಣಾಮವನ್ನು ಈಗಾಗಲೆ ಪತ್ರಿಕೆಗಳು ಸಾಕಷ್ಟು ಪ್ರಕಟಗೊಳಿಸಿವೆ. ಈ ಘಟನೆಯ ಅನಂತರ ಉಳಿದಿದ್ದ ವಿಷಾನಿಲವನ್ನು ನಿಷ್ಕ್ರಿಯಗೊಳಿಸಿ ಇನ್ನು ಮುಂದೆ ಮತ್ತೆ ದುರಂತವು ಸಂಭವಿಸದಂತೆಯೂ ಮಾಡಿರುವದು ವಿಜ್ಞಾನಶಾಸ್ತ್ರದ ಮಹಿಮೆಯನ್ನು ತಿಳಿಸುತ್ತದೆ. ಆದರೆ ಮುಂಚಿತವಾಗಿಯೇ ತೆಗೆದುಕೊಳ್ಳಬೇಕಾಗಿದ್ದ ಎಚ್ಚರಿಕೆಕ್ರಮಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದರೆ ಇಂಥ ದುರಂತವು ಸಂಭವಿಸುತ್ತಿರಲಿಲ್ಲವೇನೊ– ಎನಿಸುತ್ತದೆ. ವಿಜ್ಞಾನಿಗಳಿಗಾಗಲಿ, ಆಡಳಿತನಿರ್ವಾಹಕರಿಗಾಗಲಿ ಈ ಸದ್ಬುದ್ಧಿಯು ಸಕಾಲದಲ್ಲಿ ಪ್ರೇರಣೆಯಾಗದೆ ಹೋಗಿರುವದಕ್ಕೆ ಕಾರಣವೇನಿದ್ದೀತು? ಎಂದು ವಿಚಾರಿಸುವವರಿಗೆ ಅಧ್ಯಾತ್ಮದೃಷ್ಟಿಯಿಂದ ಒಂದು ಉತ್ತರವು ಹೊಳೆದೀತು. ಅದೇನೆಂದರೆ: ವಿಷವನ್ನು ನುಂಗಿ ಜಗತ್ತಿಗೆ ಕಲ್ಯಾಣವನ್ನುಂಟುಮಾಡಿರುವ ವಿಷಕಂಠನಾದ ಪರಮೇಶ್ವರನನ್ನು ಮರೆತಿರುವದು. ವಿಜ್ಞಾನವು ಈ ವಿಷಯದಲ್ಲಿ ಯಾವಾಗಲೂ ಕುರುಡೆಂಬುದನ್ನು ಈಗಲಾದರೂ ಜನತೆಯು ತಿಳಿದುಕೊಳ್ಳಬೇಕು. ಅಧ್ಯಾತ್ಮದ ತಳಹದಿಯಿಲ್ಲದ ವಿಜ್ಞಾನಶಾಸ್ತ್ರದ ಶೋಧಗಳು ಹೀಗೆ ದುರಂತಕ್ಕೆ ಕಾರಣವಾಗುವದಾದರೆ ಇನ್ನು ಮುಂದೆ ವಿಜ್ಞಾನಶಾಸ್ತ್ರದ ಬೆಳವಣಿಗೆಯನ್ನೇ ತಡೆಗಟ್ಟಿ ಅಧ್ಯಾತ್ಮವನ್ನೇ ಮುಂದಕ್ಕೆ ತರಬೇಕೆಂಬ ಸಲಹೆಗೆ ವಿವೇಕಿಗಳಾದ ಕೆಲವರ ವೋಟುಗಳಾದರೂ ದೊರಕೀತು-ಎನಿಸುತ್ತದೆ.

ಪುರಾಣಕಥೆಯಂತೆ ಹಿಂದೆಯೂ ಸಮುದ್ರಮಥನಕಾಲಕ್ಕೆ ಇಂಥ ಹಾಲಾಹಲ ವಿಷವು ಉತ್ಪತ್ತಿಯಾಗಿದ್ದು ದೇವಾದಿಗಳು ತಮ್ಮ ಕೆಲಸವನ್ನೇ ನಿಲ್ಲಿಸಿ ದಿಕ್ಕಾಪಾಲಾಗಿ ಓಡಿಬಿಟ್ಟರು. ಆಗ ಪರಶಿವನು ತನ್ನ ಸ್ವಾರ್ಥವನ್ನು ಲೆಕ್ಕಿಸದೆ ವಿಷವನ್ನು ಪಾನಮಾಡಿ ಜಗತ್ತಿಗೆ ನೆಮ್ಮದಿಯನ್ನುಂಟುಮಾಡಿದನು. ಈ ಕೆಲಸಕ್ಕೆ ಮಾತ್ರ ವಿಷ್ಣುವಾಗಲಿ, ಇಂದ್ರನಾಗಲಿ-ಯಾರೂ ಮುಂದೆಬರಲಿಲ್ಲ. "ಇಂಥ ಕ್ಷುದ್ರದೇವತೆಗಳನ್ನು ಕಟ್ಟಿಕೊಂಡು ನಮಗೇನು? ವಿಷಕಂಠನೂ ಮೃತ್ಯುಂಜಯನೂ ಆಪತ್ತಿಗೆ ಒದಗುವವನೂ ಸ್ವಾರ್ಥವಿಲ್ಲದವನೂ ನಿಃಸ್ಪೃಹನೂ ಪರಮವೈರಾಗ್ಯಶಾಲಿಯೂ ಆದ ಮಹಾದೇವನೆನಿಸಿದ 'ಶಂಕರ'ನೇ ನಮಗೆ ಸಾಕು-ಆತನನ್ನೇ ಆರಾಧಿಸೋಣ"-ಎಂದು ಒಬ್ಬ ಕವಿಯು ಪರಮೇಶ್ವರನನ್ನು ಸ್ತುತಿಸಿದ್ದಾನೆ. ಇಲ್ಲಿ ಶಿವ-ವಿಷ್ಣುಗಳ ತಾರತಮ್ಯಭಾವನೆಯು ಮೇಲುನೋಟಕ್ಕೆ ಕಂಡುಬಂದರೂ ಅದು ವಿವಕ್ಷಿತವಲ್ಲ. ದೇವತೆಗಳಾಗಿದ್ದರೇನು? ಸ್ವಾರ್ಥಿಗಳಾಗಲಿ, ಅಹಂಕಾರಿಗಳಾಗಲಿ ಜಗತ್ತನ್ನು ಕಾಪಾಡಲಾರರು. ತ್ಯಾಗಿಗಳೇ ಜಗದ್ರಕ್ಷಕರು. ಭಾರತೀಯಸಂಸ್ಕೃತಿಯಪ್ರತೀಕವೇ ತ್ಯಾಗವೆಂಬುದನ್ನು ಮರೆಯಬಾರದು.

---

# ಗ್ರಂಥಪರಿಚಯ

**೧. ಅದ್ವೈತತತ್ತ್ವಪ್ರಕಾಶಿಕಾ :** ('ದ್ವೈತಸಿದ್ಧಾಂತವೈಜಯಂತಿ'ಯಲ್ಲಿ ಶ್ರೀ ಸತ್ಯಧ್ಯಾನತೀರ್ಥಸ್ವಾಮಿಗಳು ಅದ್ವೈತಸಿದ್ಧಾಂತದ ಬಗ್ಗೆ ಮಾಡಿದ ಆಪಾದನೆಗಳ ಖಂಡನಾತ್ಮಕ ಗ್ರಂಥ. ಬರೆದವರು : ವಿದ್ವಾನ್ ಬ್ರಹ್ಮಶ್ರೀ ರಾಮಚಂದ್ರಶಾಸ್ತ್ರಿ ಸೂರಿ, ಕರ್ಕಿ. ಪ್ರಕಾಶಕರು : ಅದ್ವೈತಪ್ರಬೋಧಕ ಸಂಘ, ಧಾರವಾಡ. ಪುಟಗಳು : ಡೆಮ್ಮಿ ೧೪೨ ; ಬೆಲೆ : ರೂ. ೧೨.

ಈ ಗ್ರಂಥದ ಮುನ್ನುಡಿಯಲ್ಲಿ ಪ್ರಕಾಶಕರು ಹೀಗೆಂದಿದ್ದಾರೆ : "ದ್ವೈತಸಿದ್ಧಾಂತವೈಜಯಂತೀಗ್ರಂಥವು ಅದ್ವೈತಸಿದ್ಧಾಂತವನ್ನು ಹಾಗೂ ಅದ್ವೈತಮತಾನುಯಾಯಿಗಳನ್ನು ಅತ್ಯಂತವಾಗಿ ದೂಷಿಸಿದ್ದು, ಇದೊಂದು ಸ್ವಮತದುರಭಿಮಾನ ಮತ್ತು ಪರಮತದ್ವೇಷದ ಪ್ರತ್ಯಕ್ಷ ಉದಾಹರಣೆಯೇ ಆಗಿದೆಯೆನ್ನಲಡ್ಡಿಯಿಲ್ಲ. ಅದ್ವೈತಮತಾನುಯಾಯಿಗಳಲ್ಲಿ ಜನಸಾಮಾನ್ಯರು ಈ ದ್ವೇಷಜ್ವಾಲೆಯಿಂದ ನೊಂದುಕೊಂಡದ್ದಕ್ಕಾಗಿ, ಸತ್ಯಕ್ಕಾಗಿ, ನ್ಯಾಯಕ್ಕಾಗಿ, ಜನತೆಯ ಯಥಾರ್ಥದರ್ಶನಕ್ಕಾಗಿ ಈ ಅದ್ವೈತತತ್ತ್ವಪ್ರಕಾಶಿಕಾಗ್ರಂಥವನ್ನು ಪ್ರಕಟಿಸುವ ಖೇದಕಾರಕ ಕರ್ತವ್ಯವನ್ನು ಕೈಗೊಳ್ಳಬೇಕಾಯಿತು." ಈ ಉಪಕ್ರಮವನ್ನು ನೋಡಿದರೆ ಗ್ರಂಥವು ದ್ವೈತಿಗಳ- ಅದರಲ್ಲಿಯೂ ಮಾಧ್ವದ್ವೈತಿಗಳ ಮತದ ಅಸಾರತೆಯನ್ನೂ ಅವರು ತಮ್ಮ ಸಿದ್ಧಾಂತವನ್ನು ಗಂಭೀರವಾಗಿ ಪ್ರತಿಪಾದಿಸಿಕೊಳ್ಳವೆ ಅದ್ವೈತಖಂಡನೆಯನ್ನು ತೀರ ಕೆಳಮಟ್ಟದಿಂದ ತುಚ್ಛವಾಗಿ ಬೈಗುಳನಾಧ್ಯಮದಿಂದ ಮಾಡುತ್ತಾ ಇರುವದನ್ನೂ ಜನರಿಗೆ ಪರಿಚಯಮಾಡಿಕೊಡುವ ಉದ್ದೇಶವುಳ್ಳದ್ದಾಗಿದೆ ಎಂದು ಗೊತ್ತಾಗುತ್ತದೆ. ಶ್ರೀ ಶೃಂಗೇರಿಜಗದ್ಗುರುಪೀಠಾಧಿಪರಾದ ಶ್ರೀ ಶಂಕರಾಚಾರ್ಯರು ಈ ಗ್ರಂಥಪ್ರಕಟನೆಗೆ ಎರಡುಸಾವಿರರೂಪಾಯಿಗಳ ಧನಸಹಾಯವನ್ನು ನೀಡಿದ್ದಾರೆ.

ಗ್ರಂಥಶರೀರವನ್ನು ಒಳಹೊಕ್ಕು ನೋಡಿದಾಗ 'ವೈಜಯಂತಿ'ಯಲ್ಲಿ ಶ್ರೀ ಸತ್ಯಧ್ಯಾನತೀರ್ಥರು ಎತ್ತಿರುವ ಬಹುಮುಖ್ಯವಾದ ಆಕ್ಷೇಪಗಳಿಗೆಲ್ಲ ಸಮಂಜಸವಾದ ಉತ್ತರಗಳು ಇದರಲ್ಲಿವೆ. ಆದರೆ ಆಕ್ಷೇಪಗಳೇ ಹುರುಳಿಲ್ಲದವುಗಳಾದ್ದರಿಂದ ಉತ್ತರಗಳೂ ಹಾಗೇ ಇರಬೇಕಾದದ್ದು ನ್ಯಾಯವಾದರೂ ಓದುಗರಿಗೆ ನಿರಾಶೆಯನ್ನುಂಟುಮಾಡದಂತೆ ಗ್ರಂಥಕರ್ತರು ಸುಪ್ರಸಿದ್ಧರಾದ ನಾಲ್ಕು ಜನರು ಅದ್ವೈತವಿದ್ವನ್ಮಣಿಗಳ ಸಹಾಯವನ್ನು ಪಡೆದು ಸಪ್ರಮಾಣವಾಗಿಯೂ ಸಯುಕ್ತಿಕವಾಗಿಯೂ ಶಾಸ್ತ್ರಚೌಕಟ್ಟಿನಲ್ಲಿಯೇ ಅದ್ವೈತಸಿದ್ಧಾಂತವನ್ನು ಮಂಡಿಸಿ ಸಮರ್ಥಿಸಿರುತ್ತಾರೆ. ಈ ಉತ್ತರಗಳನ್ನುಕೂಡ ಮಾಧ್ವಮತಾನುಯಾಯಿಗಳು ಅರ್ಥಮಾಡಿಕೊಳ್ಳಲಾರರೆಂದೇ ನಮಗೆ ಅನಿಸುತ್ತದೆ. ಏಕೆಂದರೆ ಸರಳವಾದ ಶಂಕರಭಾಷ್ಯದ ಅಭಿಪ್ರಾಯಗಳೇ ಅವರಿಗೆ ತಿಳಿಯದೆ ಇರುವಾಗ ಇಲ್ಲಿರುವ ಶಾಸ್ತ್ರೀಯವಿಚಾರಗಳೂ ಯುಕ್ತಿಗಳೂ ಹೇಗೆತಾನೆ ಅರ್ಥವಾದಾವು? ಅಥವಾ ಈಗಾಗಲೆ ಅದ್ವೈತವನ್ನು ಅಪಾರ್ಥಮಾಡಿಕೊಂಡಿರುವಂತೆ ಈ ಗ್ರಂಥವನ್ನೂ ಅಪಾರ್ಥಮಾಡಿಕೊಂಡು ಮಾಧ್ವರು ಇನ್ನಷ್ಟು ಖಂಡನಾಬಾಣಗಳನ್ನು ಅದ್ವೈತಿಗಳಮೇಲೆ ಬಿಡಬಹುದು. 'ಅಪದ್ಧಕ್ಕೆ ಅಪ್ಪಣೆಯೆ? ಎಂದರೆ ಬಾಯಿಗೆ ಬಂದಂತೆ' ಎಂಬ ಗಾದೆಯು ಈ ಸಂದರ್ಭದಲ್ಲಿ ಪ್ರಾಜ್ಞರಿಗೆ ನೆನಪಾಗದೆ ಇರದು.

ತತ್ತ್ವಜಿಜ್ಞಾಸುಗಳ ದೃಷ್ಟಿಯಿಂದ ನಮ್ಮದೊಂದು ವಿಜ್ಞಾಪನೆಯಿದೆ. ಅದ್ವೈತಿಗಳಿಗಾಗಲೀ ಮಾಧ್ವರಿಗಾಗಲೀ ಹಿತೋಪದೇಶವನ್ನು ಮಾಡುವ ಯೋಗ್ಯತೆಯು ನಮಗಿಲ್ಲ. ಆದರೆ ಪರಮಪುರುಷಾರ್ಥವನ್ನು ಪಡೆಯುವ ಉದ್ದೇಶದಿಂದ ಬಳಿಸಾರಿದ ಅಧಿಕಾರಿಯಾದ ಶಿಷ್ಯನಿಗೆ ಯಾವ ಗುರುವಾಗಲಿ, ವಿದ್ವಾಂಸರಾಗಲಿ, ಪೀಠಾಧಿಪತಿಗಳಾಗಲಿ– ದುರ್ಬೋಧೆಯನ್ನು ಮಾಡಿ ಪರಸ್ಪರರಾಗದ್ವೇಷಗಳನ್ನು ಬೆಳೆಸುವಂಥ ಹಾದಿಯಲ್ಲಿ ಅವನನ್ನು ಒಯ್ದು ನಡುನೀರಿನಲ್ಲಿ

ಆತನನ್ನು ಕೈಬಿಡುವ ಹಕ್ಕಿರುವದಿಲ್ಲ. ಮಾಧ್ವಪೀಠಾಧಿಪರು ಇದನ್ನು ಮೊದಲು ಅರಿತುಕೊಳ್ಳಬೇಕು. ಒಂದುವೇಳೆ ಅದ್ವೈತದ ಮೇಲೆ ದ್ವೇಷವಿದ್ದರೆ ಅದನ್ನು ಗೋಪ್ಯವಾಗಿಯೇ ಇರಿಸಿಕೊಂಡು ಜನಸಾಮಾನ್ಯರಿಗೆ ವಿಷ್ಣುಭಕ್ತಿಯನ್ನೂ ರಾಗದ್ವೇಷಗಳನ್ನು ಗೆಲ್ಲುವ ಉಪಾಯವನ್ನೂ ಬೋಧಿಸಬಹುದು. ಮೂಲಭೂತವಾಗಿ ಶ್ರೀ ಮಧ್ವಾಚಾರ್ಯರ ಗ್ರಂಥಗಳಲ್ಲಿಯೇ ಸ್ಮಾರ್ತದ್ವೇಷವು ಅಡಗಿದ್ದರೂಕೂಡ ಈಗಿನ ಕಾಲದ ಜನಸಮಾಜದ ಹಿತದೃಷ್ಟಿಯಿಂದ ಅಂಥ ಭಾಗಗಳನ್ನು ಕೈಬಿಡಬೇಕು. ಸದ್ಯಕ್ಕೆ ಬ್ರಾಹ್ಮಣ್ಯವು ಉಳಿದರೆ ಸಾಕು, ಜನರು ಧರ್ಮನಿಷ್ಠರಾದರೆ ಸಾಕು- ಎಂಬ ಪರಿಸ್ಥಿತಿಯಿರುವಾಗ, ಹಾಗೂ ಜಾತಿಕುಲಗೋತ್ರಗಳಿಗೂ ವರ್ಣಾಶ್ರಮಧರ್ಮಕ್ಕೂ ವಿನಾಶಕಾಲವು ಒದಗಿರುವಾಗ ವೈದಿಕರಾದವರೇ ಪರಸ್ಪರಮತದ್ವೇಷಗಳನ್ನು ಬೆಳೆಯಿಸಿಕೊಳ್ಳುವದು ತಮ್ಮ ಮನೆಗೆ ತಾವೇ ಬೆಂಕಿಯನ್ನು ಹಾಕಿಕೊಂಡಂತೆ- ಎಂದು ತಿಳಿಯಬೇಕು. ದೂರದೃಷ್ಟಿಯುಳ್ಳ ಮಾಧ್ವಮತಾನುಯಾಯಿಗಳು ಕೂಡ ಇಂಥ ಪ್ರವೃತ್ತಿಯನ್ನು ಖಂಡಿಸಬೇಕು. ವ್ಯವಹಾರಪ್ರಪಂಚದಲ್ಲಿ ಎಲ್ಲರೂ ದ್ವೈತಿಗಳೇ. ಎಲ್ಲರಿಗೂ ಜಗತ್ತು ಆಗ ಸತ್ಯವೆಂದೇ ಕಂಡುಬರುತ್ತದೆ. ಆ ಸಮಯಕ್ಕೆ 'ಹರಿ ಸರ್ವೋತ್ತಮ'ನೆಂದು ಎಲ್ಲರೂ ಒಪ್ಪಿಯೇ ಇದ್ದಾರೆ. ಆದರೆ ಪರಮಾರ್ಥದೃಷ್ಟಿಯಲ್ಲಿ 'ಹರಿಯೇ ಅದ್ವಿತೀಯನೂ ಏಕನೂ ಸರ್ವವ್ಯಾಪಕನೂ ಆಗಿರುವನೆಂದೂ ಆತನೇ ಜಗತ್ತಾಗಿಯೂ ತೋರುತ್ತಿರುವನೆಂದೂ' ಅನುಭವವುಂಟಾದರೆ ಯಾವ ದ್ವೈತಿಯೂ ತಡೆಯಲಾರನು. ಈವರೆಗೂ ದ್ವೈತಿಯು ಸ್ವಾನುಭವವೇ ಆಗಿರುವ ಸುಷುಪ್ತಿಯಲ್ಲಿ ಯಾವ ಮಾಧ್ವನಿಗೂ ದ್ವೈತಪ್ರಪಂಚವು ಕಂಡದ್ದು ದಾಖಲೆ ಇಲ್ಲ. ಹೀಗಿರುವಲ್ಲಿ ಶ್ರೌತಾನುಭವವನ್ನು ಅಪಲಾಪಮಾಡಿ ತರ್ಕದಿಂದ ಮತಸಿದ್ಧಾಂತವನ್ನು ಬುಡವಿಲ್ಲದೆ ಸ್ಥಾಪಿಸಲು ಹೊರಟರೆ ಅದು ತಳಹದಿಯಿಲ್ಲದೆ ಕಟ್ಟಿದ ಸೇತುವೆಯಂತೆ ಕುಸಿಯುವದೇ ಗತಿಯಾದೀತು. ಒಟ್ಟಿನಲ್ಲಿ ಇಂಥ ಖಂಡನ-ಪ್ರತಿಖಂಡನಗ್ರಂಥಗಳು ಇನ್ನು ಸಾಕು. ದಕ್ಷಿಣದೇಶದಲ್ಲಿ ಸುಪ್ರಸಿದ್ಧರಾಗಿರುವ ಆಚಾರ್ಯತ್ರಯರ ಪ್ರಸ್ಥಾನತ್ರಯಭಾಷ್ಯಗಳ ಮೂಲವನ್ನೇ ಸ್ಮಾರ್ತ-ಮಾಧ್ವ-ಶ್ರೀವೈಷ್ಣವ ಪಂಡಿತರುಗಳು ದುರಾಗ್ರಹಗಳಿಲ್ಲದೆ ಓದಿ ಗುಣೋಪಸಂಹಾರನ್ಯಾಯದಿಂದ ಸಾರಗ್ರಹಣಮಾಡಿಕೊಂಡು ಅಧ್ಯಾತ್ಮವಿದ್ಯೆಯ ಸಾಧನಸಿದ್ಧಾಂತಗಳ ತಿರುಳನ್ನೇ ಸರ್ವಸಮ್ಮತವಾದ ರೀತಿಯಲ್ಲಿ ಮಹಾಜನರಿಗೆ ಬೋಧಿಸುವಂತಾಗಲೆಂದು ಪ್ರಾರ್ಥಿಸುವೆವು.

**೨. ಶ್ರೀ ಮೂಕಾಂಬಿಕಾಕ್ಷೇತ್ರಮಹಾತ್ಮ್ಯ :** ಪುಟಗಳು ಕ್ರೌನ್ : 84; ಬೆಲೆ : ರೂ. 3; **೩. ಸಂಧ್ಯಾನುಷ್ಠಾನಸಂಗ್ರಹ :** ಬೆಲೆ : ರೂ. ೧; (ಪುಟಗಳು ೨೦) **೪. ವರ್ಣಭೇದಗಳ ರಹಸ್ಯಪ್ರತಿಪಾದನೆ :** ಪುಟ : ೩೦; ಬೆಲೆ; ರೂ. ೧; ಈ ಮೂರೂಗ್ರಂಥಗಳ ಲೇಖಕರು : ಬುರುಗನಹಳ್ಳಿ ಭೀಮಸೇನ ಶರ್ಮಾ; ಪ್ರಕಾಶಕರು : ಎಸ್. ಸುಬ್ರಹ್ಮಣ್ಯ ಅಯ್ಯರ್ 111/9, ಆರ್. ಸಿ. ಕಾಲೋನಿ, 3ನೇ ಬ್ಲಾಕ್, ಜಯನಗರ, ಬೆಂಗಳೂರು-11.

(೧) ಕೋಲಾಪುರ (ಕೊಲ್ಲೂರು) ಕ್ಷೇತ್ರಮಾಹಾತ್ಮ್ಯವು ಸ್ಕಾಂದಪುರಾಣದಲ್ಲಿದೆ. ಅಲ್ಲಿರುವ ಮೂರು ಅಧ್ಯಾಯಗಳಲ್ಲಿನ ಶ್ಲೋಕಗಳನ್ನು ಸಂಗ್ರಹಿಸಿ ಕನ್ನಡಾನುವಾದಸಹಿತವಾಗಿ ಈ ಪುಸ್ತಕದಲ್ಲಿ ಕೊಡಲಾಗಿದೆ. ಇದರಲ್ಲಿ ದೇವೀನಿವಾಸದ ನಿರೂಪಣ, ಜ್ಯೋತಿರ್ಲಿಂಗಾರ್ಚನಕ್ರಮ, ದೇವೀಪ್ರಸಾದದ ಸಾಧನ-ಎಂಬ ವಿಷಯಗಳಿವೆ. 'ಮೂಕಾಂಬಿಕಾದ್ವಾದಶರತ್ನಗೀತ' ಎಂಬ ಹನ್ನೆರಡು ಕೀರ್ತನೆಗಳು ರಾಗತಾಳಗಳ ನಿರ್ದೇಶನೊಡನೆ ಕೊನೆಯಲ್ಲಿ ಕೊಡಲ್ಪಟ್ಟಿವೆ. (೨) ಸಂಧ್ಯಾನುಷ್ಠಾನಸಂಗ್ರಹವು ಸಂಧ್ಯಾಪ್ರಯೋಗವನ್ನೊಳಗೊಂಡಿದೆ. (೩) ವರ್ಣಭೇದರಹಸ್ಯಪ್ರತಿಪಾದನ- ಗ್ರಂಥವು ವರ್ಣಸಾಮರಸ್ಯವನ್ನೂ- ಚಾತುರ್ವರ್ಣ್ಯವ್ಯವಸ್ಥೆಯ ಸದುಪಯೋಗಗಳನ್ನೂ ಪ್ರತಿಪಾದಿಸುತ್ತದೆ. ಸುಸ್ವಾಗತ.

# ಅವಿದ್ಯಾಸ್ವರೂಪ

(ಸಂಪಾದಕರು)

ಶ್ರೀಶಂಕರಭಗವತ್ಪಾದರವರ ಪ್ರಕ್ರಿಯೆಯಂತೆ ವಿದ್ಯಾವಿದ್ಯಾಸ್ವರೂಪಗಳನ್ನು ಜಿಜ್ಞಾಸುಗಳು ನಿಸ್ಸಂಶಯವಾಗಿ ಗೊತ್ತುಪಡಿಸಿಕೊಳ್ಳಬೇಕಾದದ್ದು ಮುಕ್ತಿಗೆ ಅವಶ್ಯವಾದ ಸಾಮಗ್ರಿಯಾಗಿರುತ್ತದೆ. ಏಕೆಂದರೆ ವಿದ್ಯೆಯಿಂದಲೇ ಮುಕ್ತಿಯೆಂದೂ ಅವಿದ್ಯೆಯು ವಿದ್ಯೆಯಿಂದ ಮಾತ್ರವೇ ನಾಶವಾಗುವದೆಂದೂ ವೇದಾಂತಿಗಳೆಲ್ಲರೂ ಸರ್ವಸಮ್ಮತವಾಗಿ ಒಪ್ಪಿರುತ್ತಾರೆ. ಆದ್ದರಿಂದ ವಿದ್ಯಾನಾಶ್ಯವಾದ ಅವಿದ್ಯೆಯು ಯಾವದು? ಅದರ ಸ್ವರೂಪವೇನು? ಎಂಬಿದನ್ನು ಈಗ ವಿಚಾರಮಾಡೋಣ.

ಪ್ರತಿಯೊಬ್ಬ ಮುಮುಕ್ಷುವಿಗೂ ಅವಿದ್ಯೆಯು ನಾಶವಾಗಬೇಕೆಂಬುದೇ ಇಷ್ಟವಾಗಿರುತ್ತದೆ. ಅವಿದ್ಯೆಯು ಏಕೆ ಬಂತು? ಹೇಗೆ ಬಂತು? ಎಂದು ಕೇಳುವವರೂ ಇದ್ದಾರಾದರೂ ಅಂಥವರಿಗೂ 'ಅವಿದ್ಯೆಯು ಹೋಗಬೇಕು; ಅನರ್ಥವು ತೊಲಗಬೇಕು'-ಎಂಬಿದೇ ಒಪ್ಪಾಗಿರುತ್ತದೆ. ಹೀಗೆ ಎಂದಾದರೂ ಕಳೆದುಕೊಳ್ಳಲೇಬೇಕಾಗಿರುವ ಅವಿದ್ಯೆಯ ವಿಷಯಕ್ಕೆ ಅದು ಇದೆ- ಎಂಬ ಸಾಧಾರಣವಾದ ತಿಳಿವಳಿಕೆಯು ಸಾಕಾಗಿರುತ್ತದೆಯೇ ಹೊರತು ಅದನ್ನು ಪ್ರಮಾಣಗಳಿಂದ ಸಿದ್ಧಮಾಡಿಕೊಡಿರಿ-ಎಂದು ಯಾರೂ ಕೇಳುವದಿಲ್ಲ. ಏಕೆಂದರೆ ಅದು ಪ್ರಮಾಣಸಿದ್ಧವೇ ಆಗಿಬಿಟ್ಟರೆ ನಿಜವೆಂದೇ ಆಗಿ ನಮ್ಮೊಡನೆ ಉಳಿದುಕೊಂಡೇಬಿಡುತ್ತದೆ. ಹೋಗುವದೇ ಇಲ್ಲ. ಪ್ರಮಾಣಸಿದ್ಧವಾದದ್ದೂ ಬಾಧಿತವಾಗಬಲ್ಲದು-ಎಂದಾಗಿಬಿಟ್ಟರೆ ಎಲ್ಲಾ ಶಾಸ್ತ್ರಗಳೂ ದರ್ಶನಗಳೂ ಬಾಧಿತವಾಗಿಬಿಡಬೇಕಾಗುವದು. ಆದ್ದರಿಂದಲೇ ಶ್ರೀಶಂಕರಾಚಾರ್ಯರು ಅವಿದ್ಯೆಯನ್ನು ಪ್ರಮಾಣದಿಂದ ಸಿದ್ಧಮಾಡಲು ಹೋಗಿರುವದಿಲ್ಲ. ಅವರು ಅವಿದ್ಯೆಯ ಸ್ವರೂಪವನ್ನು ಲೋಕದೃಷ್ಟಿಯಿಂದ ತಿಳಿಸಲು ಉಪಕ್ರಮಿಸಿರುವ ಬ್ರಹ್ಮಸೂತ್ರಭಾಷ್ಯದ ಅವತರಣಿಕಾಭಾಗವಾದ "ಅಧ್ಯಾಸಭಾಷ್ಯ"ದಲ್ಲಿ ಒಂದೇ ಒಂದು ಪ್ರಮಾಣವಚನವನ್ನೂ ಉದಾಹರಿಸಿರುವದಿಲ್ಲ. 'ನೈಸರ್ಗಿಕೋಽಯಂ ಲೋಕವ್ಯವಹಾರಃ' (ಅವಿದ್ಯಾವ್ಯವಹಾರವು ತೀರ ಸ್ವಾಭಾವಿಕ) ಎಂದೇ ತಿಳಿಸಿದ್ದಾರೆ. ಇಲ್ಲಿ ಸ್ವಾಭಾವಿಕ ಎಂಬುದಕ್ಕೆ ಸಹಜ-ಅಕೃತ-ಸಿದ್ಧ ಎಂಬರ್ಥವಿಲ್ಲ. ಮತ್ತೇನೆಂದರೆ ಅವಭಾಸ (ಹಾಗೆ ಇದ್ದಂತೆ ತೋರುತ್ತದೆ) ಎಂದೇ ಅಭಿಪ್ರಾಯ. ಆಚಾರ್ಯರು ಉದಾಹರಣೆಯಿಂದಲೂ ಈ ವಿಷಯವನ್ನು ಮತ್ತೆ ಸ್ಪಷ್ಟಗೊಳಿಸಿರುತ್ತಾರೆ. ಹೇಗೆಂದರೆ: 'ಕಪ್ಪೆಯಚಿಪ್ಪೇ ಬೆಳ್ಳಿಯಂತೆ ಕಾಣುತ್ತದೆ' ಎಂಬಲ್ಲಿ ಬೆಳ್ಳಿಯ ಆಭಾಸವೆಂಬುದು ಕಪ್ಪೆಯಚಿಪ್ಪಿನ ಅಜ್ಞಾನನಿಮಿತ್ತವಾಗಿದ್ದು ತೋರಿಕೆಯ ಕಾಲಕ್ಕೆ 'ಬೆಳ್ಳಿ' ಎಂದು ಭ್ರಾಂತಜನರಿಂದ ವ್ಯವಹರಿಸಲ್ಪಡುತ್ತದೆ-ಎಂದೇ ವಿವರಿಸಿರುತ್ತಾರೆ. ಆದ್ದರಿಂದ ಶಾಸ್ತ್ರೀಯಚೌಕಟ್ಟಿನಲ್ಲಿ ಈ ವಿಷಯವನ್ನು ಮಂಡಿಸಲು ಹೊರಟರೆ ಭಗವತ್ಪಾದರವರಿಗೆ ಜ್ಞಾನಾಧ್ಯಾಸವು (ಅವಿದ್ಯೆ) ಸಮ್ಮತವೇ ಹೊರತು ಅರ್ಥಾಧ್ಯಾಸವಲ್ಲ-ಎಂದು ಹೇಳಬೇಕಾಗಿಬರುತ್ತದೆ. ಈ ವಿಚಾರವು ಅತಿ ಮುಖ್ಯವಾದುದು-ಎಂಬಿದನ್ನು ವಿಚಾರಕರು ನೆನಪಿಡಬೇಕು.

ಈಗ ವೇದಾಂತಶಾಸ್ತ್ರವು ಏತಕ್ಕೆ ಹೊರಟಿದೆ? ಎಂಬ ಪ್ರಶ್ನೆಯನ್ನು ಎತ್ತಬಹುದಾಗಿದೆ. ಭಗವತ್ಪಾದರ ಅಭಿಪ್ರಾಯದಂತೆ ಈ ಅವಿದ್ಯೆಯೆಂಬ ಅನರ್ಥವನ್ನು ಕೊನೆಗಾಣಿಸಿ ಆತ್ಮೈಕತ್ವಜ್ಞಾನವನ್ನುಂಟುಮಾಡುವದೇ ವೇದಾಂತಶಾಸ್ತ್ರದ ಪ್ರಯೋಜನವಾಗಿರುತ್ತದೆ. ಆದರೂ ಪ್ರತಿಪಾದ್ಯವಾಗಿರುವ ವಿಷಯವು ಆತ್ಮೈಕತ್ವವೇ ಹೊರತು ಅನರ್ಥಕಾರಣವಾದ ಅವಿದ್ಯೆಯಲ್ಲ. ಅವಿದ್ಯೆಯು ಇದೆ-ಎಂಬುದನ್ನು ಅವಿದ್ಯಾವಂತನೇ ಸಮರ್ಥಿಸಿಕೊಳ್ಳಬೇಕು. ಬ್ರಹ್ಮನಿಷ್ಠರಾಗಲಿ, ಶ್ರುತಿಗಳಾಗಲೀ ಈ ಕೆಲಸವನ್ನು ಒಪ್ಪಿಕೊಂಡಿಲ್ಲ. ಅದಕ್ಕೆ ಕೈ ಹಾಕುವದೂ ಇಲ್ಲ. ಆದರೆ ಅವಿದ್ಯಾವಂತನೊಡನೆ ಮಾತನಾಡುವಾಗ ಅಥವಾ ಅವಿದ್ಯಾವಂತನಾದ ಶಿಷ್ಯನಿಗೆ ಗುರುವು ಉಪದೇಶಿಸುವಾಗ ವಿದ್ಯಾವಂತರೂ ಅವಿದ್ಯಾವಂತರಂತೆ ಮಾತನಾಡಬಹುದು. ಇಲ್ಲವಾದರೆ ವ್ಯವಹಾರವು ಸಿದ್ಧಿಸುವದಿಲ್ಲ. ಹೀಗೆ ವ್ಯವಹರಿಸಿದ ಮಾತ್ರದಿಂದ ವಿದ್ಯಾವಂತರೇನೂ ಅವಿದ್ಯಾವಂತರಾಗುವದೂ ಇಲ್ಲ. ಆದ್ದರಿಂದ ಆಚಾರ್ಯರು ಒಂದು ಕಡೆ 'ಅವಿದ್ಯೆಯು ಯಾರಿಗೆ?' ಎಂಬ ಪ್ರಶ್ನೆಗೆ "ಕೇಳುತ್ತಿರುವ ನಿನಗೇ" ಎಂದೇ ತಿಳಿಸಿಬಿಟ್ಟಿದ್ದಾರೆ. ಈ ವಿಚಾರಗಳನ್ನು ಮನನಮಾಡಿದಾಗಲೂ ಅವಿದ್ಯೆಯು ಕೇವಲ ಅಂತಃಕರಣಜನ್ಯವಾದ ಮಿಥ್ಯಾಪ್ರತ್ಯಯವೇ ಹೊರತು ವಸ್ತುರೂಪವಲ್ಲ-ಎಂದು ಗೊತ್ತಾಗುತ್ತದೆ.

ಅವಿದ್ಯೆ, ಅಧ್ಯಾಸ-ಎಂಬಿವು ಪರ್ಯಾಯಶಬ್ದಗಳೆಂದೇ ಆಚಾರ್ಯರು ತಿಳಿಸಿದ್ದಾರೆ. ಆದ್ದರಿಂದ ಅವಿದ್ಯೆಯು ತನಗೆ ಕಾರಣವಾಗಿ ಮತ್ತೊಂದು ಅವಿದ್ಯೆಯನ್ನು ಹೊಂದಿರುವದಿಲ್ಲ ಎಂದು ತಿಳಿಯಬೇಕು. ಸಾಮಾನ್ಯವಾಗಿ ಎಲ್ಲ ವ್ಯವಹಾರಗಳಲ್ಲಿಯೂ ಇದು ಹೇಗೆ? ಏಕೆ? ಇದಕ್ಕೇನು ಕಾರಣ? ಎಂದು ಕೇಳುವದು ಮನುಷ್ಯನ ಒಂದು ಗೀಳಾಗಿದ್ದರೂ ಅವಿದ್ಯೆಯ ವಿಷಯದಲ್ಲಿ ಹಾಗೆ ಯಾರೂ ಕೇಳುವದಿಲ್ಲ. 'ನಾನು ಯಾವಾಗ ದಡ್ಡನಾದೆ? ಎಲ್ಲಿ ದಡ್ಡನಾದೆ? ನನಗೆ ಗೊತ್ತಿಲ್ಲ-ಎನ್ನುವದು ಎಂದಿನಿಂದ ಪ್ರಾರಂಭವಾಯಿತು?'- ಇಂಥ ಪ್ರಶ್ನೆಗಳಿಗೆ ಉತ್ತರವೇ ಇರುವದಿಲ್ಲ. ಕಾರಣವೇನೆಂದರೆ ಪ್ರಶ್ನೋತ್ತರಗಳೂ ಕಾಲದೇಶಗಳೂ ಅವಿದ್ಯಾಕ್ಷೇತ್ರದಲ್ಲೇ ಸೇರಿಬಿಟ್ಟಿರುತ್ತವೆ. ಆದ್ದರಿಂದ ಈ ಅನರ್ಥಕಾರಿಯಾದ 'ಅವಿದ್ಯೆ' (ಗೊತ್ತಿಲ್ಲ) ವನ್ನು ಕಳೆದು "ನಾನು ಅವಿದ್ಯಾವಂತನಲ್ಲ, ನನಗೆ ಎಂದೆಂದೂ ತ್ರಿಕಾಲದಲ್ಲಿಯೂ ಅವಿದ್ಯೆಯಿರಲಿಲ್ಲ; ನಾನು ಆತ್ಮನೇ"-ಎಂಬ ತಿಳಿವಳಿಕೆಯನ್ನು ಜಿಜ್ಞಾಸುವಿಗೆ ಉಂಟುಮಾಡಿಕೊಡುವದಕ್ಕಾಗಿಯೇ ವೇದಾಂತಶಾಸ್ತ್ರಗಳು ಹೊರಟಿವೆ. ಶ್ರುತಿಶಾಸ್ತ್ರಗಳ ಉದ್ದೇಶವೇನೆಂದರೆ ಇದ್ದದ್ದನ್ನು ಇದೆ-ಎಂದು ತಿಳಿಸಿಕೊಡುವದು ಮಾತ್ರವೇ ಆಗಿದೆ. 'ಜ್ಞಾಪಕಂ ಶಾಸ್ತ್ರಂ' ಎಂದೇ ಆಚಾರ್ಯರು ಅಂಗೀಕರಿಸಿದ್ದಾರೆ. ಈ ಅಭಿಪ್ರಾಯದಂತೆ ಎಂದೆಂದೂ ಇರತಕ್ಕ ಬ್ರಹ್ಮವನ್ನು ಇದೆ-ಎನ್ನುವದು, ಎಂದೆಂದೂ ಇಲ್ಲದ ಅವಿದ್ಯೆಯನ್ನು ಇಲ್ಲ ಎನ್ನುವದು- ಇಷ್ಟೇ ವೇದಾಂತಶಾಸ್ತ್ರದ ಕೆಲಸವಾಗಿರುತ್ತದೆ. ವಸ್ತುಧರ್ಮವನ್ನು ಅಲ್ಲಗಳೆಯುವದಕ್ಕಾ

ಗಲಿ, ಇಲ್ಲದ್ದನ್ನು ಇದೆ ಎಂದು ಸಿದ್ಧಗೊಳಿಸುವದಕ್ಕಾಗಲೀ ವೇದಾಂತಶಾಸ್ತ್ರವು ಹೊರಟಿಲ್ಲ- ಎಂದೇ ಆಚಾರ್ಯರು ಸಾರಿರುತ್ತಾರೆ.

ಹೀಗೆ ಆಚಾರ್ಯರ ಕಾಲಕ್ಕೆ ಅನುಭವಾನುಗುಣವಾಗಿ ವಿವರಿಸಲ್ಪಟ್ಟಿದ್ದ ವೇದಾಂತೋಪದೇಶವು ಅವರ ಕಾಲಾನಂತರದಲ್ಲಿ ಮರೆಯಾಗುತ್ತಾ ಬಂದು ವೇದಾಂತ ದೊಡನೆ ಸಾಂಖ್ಯ-ಯೋಗ-ನ್ಯಾಯಾದಿದರ್ಶನಗಳ ಅಭಿಪ್ರಾಯಗಳು ಕಲಬೆರಕೆ ಯಾದದ್ದರ ಫಲವಾಗಿ ಅದ್ವೈತವು ಪರಿನಿಷ್ಠಿತ-ಸಿದ್ಧ-ವಸ್ತು(ನಿಷ್ಠ)ತಂತ್ರಸಿದ್ಧಾಂತ ವಾಗಿದ್ದರೂ 'ಪ್ರತಿಪಾದ್ಯ'ವಾಗಿ ಭಾವಿಸಲ್ಪಟ್ಟು ಮೆಲ್ಲನೆ ಅನುಭವದಿಂದ ಜಾರಿ ಬಿಟ್ಟಿತು. ಕೇವಲ ಅಧ್ಯಾಸವಾದದಿಂದ ಸಿದ್ಧಾಂತಪ್ರತಿಪಾದನೆಯು ಸಾಗಲಾರ ದೆಂಬ ಅಭಿಪ್ರಾಯವು ಮೂಡಿದ ಕಾಲಕ್ಕೆ ಅಧ್ಯಾಸವಾದವು ಹಿಂದಕ್ಕೆ ಬಿದ್ದು ಅವಿದ್ಯಾವಾದವು ತಲೆಯೆತ್ತಿಕೊಂಡಿತು. ಬರುಬರುತ್ತಾ ಅದು 'ಅವಿದ್ಯೋ ಪಾದಾನವಾದ'ವಾಗಿ ಮಾರ್ಪಟ್ಟಿತು. 'ಬ್ರಹ್ಮಸಿದ್ಧಿ' ಎಂಬ ಗ್ರಂಥವನ್ನು ಬರೆದಿರುವ ಶ್ರೀ ಮಂಡನಮಿಶ್ರರು 'ಅವಿದ್ಯೋಪಾದಾನವಾದಿಗಳು ಹೀಗೆ ಹೇಳುತ್ತಾರೆ'-ಎಂದು ಒಮ್ಮೆ ಪರಾಮರ್ಶಿಸಿದ್ದಾರೆ. ಈಗ ಅಧ್ಯಾಸವಾದಕ್ಕೂ ಅವಿದ್ಯಾವಾದಕ್ಕೂ ವ್ಯತ್ಯಾಸವೇನು? ಎಂಬಿದನ್ನು ಮಾತ್ರ ತಿಳಿದಿರೋಣ.

ಅಧ್ಯಾಸವಾದದಲ್ಲಿ ಪ್ರಮಾತೃವಿನ ಅಂತಃಕರಣಸಂಬದ್ಧವಾದ ಅವಿದ್ಯೆಗಿಂತ ಬೇರೆಯಾಗಿ ವಸ್ತುರೂಪವಾಗಿ ಯಾವ ಅವಿದ್ಯೆಯನ್ನೂ ಒಪ್ಪಿರುವದಿಲ್ಲ. ಆದರೆ ಈ ಅವಿದ್ಯೆಯು ವೃತ್ತಿರೂಪವಾಗಿರುವದರಿಂದ ಇದು ಆಕಾಶಾದಿಪಂಚಮಹಾಭೂತ ಗಳಿಂದ ಕೂಡಿದ ಮಹಾಪ್ರಪಂಚವನ್ನು ಸೃಷ್ಟಿಸಬಲ್ಲದೆ? ಎಂಬ ಸಂಶಯವು ವಿಚಾರಕರಲ್ಲಿ ಉಂಟಾಗಿರಬೇಕು. ಬ್ರಹ್ಮನನ್ನೇ ಜಗತ್ಕಾರಣವಾಗಿ ಹೇಳಬಹು ದಾಗಿತ್ತಲ್ಲ? ಎಂದರೆ ಬ್ರಹ್ಮವು ನಿರ್ವಿಶೇಷಕೂಟಸ್ಥಅದ್ವಿತೀಯಚೈತನ್ಯವಾಗಿದ್ದು ಅದು ಸ್ವಲ್ಪವೂ ಚಲಿಸಲಾರದಾದ್ದರಿಂದ ಜಗತ್ಕಾರಣವೆನಿಸಲಾರದು. ಪ್ರಕೃತಿ ಕಾರಣವಾದವು ದ್ವೈತಾಪತ್ತಿಯನ್ನುಂಟುಮಾಡಿ ಸಿದ್ಧಾಂತವನ್ನೇ ಹಾಳುಮಾಡು ತ್ತದೆ. ಆದ್ದರಿಂದ ಸತ್ತೆಂದಾಗಲಿ ಅಸತ್ತೆಂದಾಗಲಿ ಹೇಳಲುಬಾರದ, ಬ್ರಹ್ಮದ ಅದ್ವಿತೀಯತ್ವಕ್ಕೆ ಹಾನಿಯನ್ನುಂಟುಮಾಡದ, ಆದರೆ ಬ್ರಹ್ಮಜ್ಞಾನದಿಂದ ಬಾಧ್ಯ ವಾಗುವ, ಅನಿರ್ವಚನೀಯವಾದ ಶಕ್ತಿಯೊಂದು ಬ್ರಹ್ಮಾಶ್ರಿತವಾಗಿದ್ದುಕೊಂಡು ಜಗದ್ವ್ಯಾಪಾರವನ್ನು ಬ್ರಹ್ಮವು ನಿರ್ವಹಿಸುವಂತೆ ಮಾಡುತ್ತದೆ; ಅದು ಜೀವ ರಲ್ಲಿರುವ ಅಧ್ಯಾಸಕ್ಕೂ ಕಾರಣವಾದ್ದರಿಂದ ಮೂಲಾವಿದ್ಯೆಯೆನಿಸಿದೆ- ಎಂಬ ಒಂದು ಹೊಸಪ್ರಸ್ಥಾನವನ್ನು ಬೆಳೆಸಲಾಯಿತು. ಅದಕ್ಕೆ ತಕ್ಕ ಯುಕ್ತಿಗಳು, ಪ್ರಮಾಣಗಳನ್ನೂ ಜೋಡಿಸಲಾಯಿತು. ಹೀಗೆ ಅವಿದ್ಯೋಪಾದಾನವಾದವು ಆಚಾರ್ಯರಿಂದ ಈಚೆಗೆ ಬೆಳೆದುಬಂದಿದ್ದು ಈಗಿನ ಕಾಲಕ್ಕೆ ಅದ್ವೈತವೇದಾಂತದ ಅವಿಭಾಜ್ಯ ಅಂಗನಾಗಿದೆ. ಮತ್ತೆ ವಿಚಾರಿಸೋಣ.

# ಸತ್ಯಜ್ಞಾನಾನಂದ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಪರಮಾತ್ಮನನ್ನು ಸತ್ಯ, ಜ್ಞಾನ, ಆನಂದ-ಎಂಬ ಮೂರು ವಿಶೇಷಣಗಳಿಂದ ಶಾಸ್ತ್ರಗಳಲ್ಲಿ ವರ್ಣಿಸಿರುವದು ಕಂಡುಬರುತ್ತದೆ. ಸತ್ಯ ಎಂದರೆ ಎಂದೆಂದಿಗೂ ಇದ್ದದ್ದು ಇದ್ದಂತೆಯೇ ಸ್ವರೂಪದಲ್ಲಿ ಮಾರ್ಪಡದೆ ಇರುವದು. ಜ್ಞಾನವೆಂದರೆ ಮಾರ್ಪಡದ ಅರಿವು. ಆನಂದವೆಂದರೆ ಏರುಪೇರಿಲ್ಲದ ನಿತ್ಯಸುಖ. ಆದ್ದರಿಂದ ಎಲ್ಲೆಲ್ಲಿ ಸತ್ಯ, ಜ್ಞಾನ, ಆನಂದ- ಇವುಗಳ ಹಬ್ಬಗೆಯು ಕಾಣುವದೋ ಅಲ್ಲೆಲ್ಲ ಭಗವಂತನು ಅಷ್ಟಷ್ಟು ಪ್ರಕಟವಾಗಿರುತ್ತಾನೆ-ಎಂದು ನಾವು ನಂಬಬಹುದು.

ಸತ್ಯವನ್ನು ಕಾಣಬೇಕೆನ್ನುವವನು ಕೈಯಲ್ಲಾದಮಟ್ಟಿಗೂ ಸತ್ಯವನ್ನು ಹಿಡಿಯಬೇಕೆನ್ನುವದು ಮೇಲೆಯೇ ಕಾಣಿಸುತ್ತದೆ. ನಿಜವನ್ನು ಕಂಡುಕೊಳ್ಳುವದಕ್ಕೇ ಪ್ರಯತ್ನಿಸುತ್ತಿರುವದು, ತನಗೆ ತಿಳಿದಿರುವ ನಿಜವನ್ನು ಮರೆಮಾಚದೆ ಹೇಳುವದು, ನಿಜಕ್ಕೆ ಆತಂಕವಾಗದಂತೆ ನಡೆಯುವದು- ಇವೆಲ್ಲ ಭಗವಂತನ **ಸತ್ಯರೂಪದ ಆರಾಧನೆ**- ಎನಿಸುವದು.

ಇದರಂತೆ ಜ್ಞಾನವೆಂದರೆ ಸರಿಯಾದ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಎಡೆಬಿಡದೆ ಪ್ರಯತ್ನಿಸುತ್ತಿರುವದು ; ಅಜ್ಞಾನ, ಸಂಶಯ, ತಪ್ಪುತಿಳಿವಳಿಕೆ -ಇವುಗಳನ್ನು ಮೆಚ್ಚದೆಇರುವದು ; ನಮ್ಮ ನೆರೆಯವರ ಅಜ್ಞಾನವನ್ನು ಕಳೆದು ನಿಜವನ್ನು ತಿಳಿಯುವದಕ್ಕೆ ಸಹಾಯಮಾಡುವದು- ಇವೆಲ್ಲವೂ **ಭಗವಂತನ ಜ್ಞಾನರೂಪದ ಆರಾಧನೆ**- ಎನಿಸುವದು.

ಹೀಗೆಯೇ ಯಾವದಾದರೂ ಅಲ್ಪಸುಖಕ್ಕೆ ಜೋತುಬಿದ್ದು ಮನಸ್ಸಿನ ಸಮತ್ವವನ್ನು ಕಳೆದುಕೊಳ್ಳುವದಕ್ಕೆ ಹೋಗದಿರುವದು, ಭಗವಂತನ ಕಲ್ಯಾಣ ಗುಣಗಳನ್ನು ನೆನೆದು ಮನಸ್ಸಿನಲ್ಲಿ ಸಮತೆಯ ಆನಂದವನ್ನು ತಂದುಕೊಳ್ಳುವದಕ್ಕೆ ಪ್ರಯತ್ನಿಸುವದು, ಸಜ್ಜನರ ಮತ್ತು ಶಾಸ್ತ್ರದ ಬೋಧೆಯಿಂದ ಆನಂದದ ಮಾರ್ಗವನ್ನು ಅರಿತುಕೊಳ್ಳುವದಕ್ಕೆ ಯತ್ನಿಸುವದು, ನೆರೆಹೊರೆಯವರಲ್ಲಿ ಎಲ್ಲರನ್ನೂ ಸಮಪ್ರೇಮದಿಂದ ಕಾಣುತ್ತಾ ತಾನೂ ಆನಂದದಿಂದಿದ್ದು ಇನ್ನೊಬ್ಬರನ್ನೂ ಆನಂದದಲ್ಲಿ ಅದ್ದುವದಕ್ಕೆ ಹವಣಿಸುವದು- ಇವು ಭಗವಂತನ **ಆನಂದರೂಪದ ಆರಾಧನೆ**- ಎನಿಸುವದು.

ಭಾವುಕರೆ, ಸತ್ಯ, ಜ್ಞಾನ, ಆನಂದ- ಎಂಬ ಮೂರು ಸುಗಂಧಪುಷ್ಪಗಳಿಂದ ಭಗವಂತನನ್ನು ಪೂಜಿಸಿರಿ. ಸತ್ಯವೂ ಶಿವವೂ ಸುಂದರವೂ ಆದ ಭಗವತ್ತತ್ತ್ವವನ್ನು ಗುರುಗಳ ಹಾಗೂ ಶಾಸ್ತ್ರಗಳ ಮೂಲಕ ಅರಿತುಕೊಳ್ಳಲು ನಿರಂತರವಾಗಿ ಪ್ರಯತ್ನಿಸಿರಿ. ನಿಮಗೆ ಸತ್ಯಜ್ಞಾನಾನಂದಗಳ ಪರಮಲಾಭವು ಬೇಗನೆ ಆಗುವದು.

—— ——

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ: MPN. 819 ಹೆಚ್. ಮುನಿಸ್ವಾಮಯ್ಯನವರು, ಬೆಂಗಳೂರು; 820 ಜಿ. ವಿ. ಮಾವಿನಕುರ್ವೆಯವರು, ಬೆಂಗಳೂರು; 821 ಆರ್. ಬಿ. ಗೋಪಿನಾಥರವರು, ಬೆಂಗಳೂರು; ಈ ಮಹಾಶಯರುಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ಕೊಟ್ಟಿರುತ್ತಾರೆ. MPO. 542 ಕೆ. ಕೃಷ್ಣಭಟ್‌ರವರು, ಮಂಗಳೂರು; 609 ವಿಶ್ವನಾಥಭಟ್ಟರು, ಶಿವಮೊಗ್ಗ; 91 ಚ. ಲ. ಪರಮೇಶ್ವರಗುಪ್ತ, ದಾವಣಗೆರೆ–ಇವರುಗಳು ರೂ. ೫೧ ರಂತೆ ಹೆಚ್ಚಿಗೆ ನೀಡಿರುತ್ತಾರೆ.

**೫೪ನೆಯ ಸಂಪುಟಕ್ಕೆ ಪೋಷಕಮಹಾಶಯರುಗಳು:** (ರೂ. ೨೦ರಂತೆ) ಶ್ರೀಗಳಾದ : ಚಂದ. ನಂ. 464 ಪಿ. ರವೀಂದ್ರನಾಥ, ಬೆಂಗಳೂರು; 469 ಎಸ್. ಕೆ. ಮಾಧವರಾವ್ ರವರು, ವೇರವಲ್ (ಗುಜರಾತ್) ; 470 ಜಿ. ವಿ. ರಾಮನ್ ರವರು, ಬೆಂಗಳೂರು; 473 ಎಸ್. ಪದ್ಮನಾಭನ್‌ರವರು, ಮದ್ರಾಸ್; 479 ಜಿ. ಸುಂದರೇಶರವರು, ಕನಕಪುರ; 484 ಬಸವರಾಜಕರಗಾರ, ಬೀದರ್.

1984 ನೆಯ ಡಿಸೆಂಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :–

**ಗ್ರಂಥಪ್ರಕಟನನಿಧಿಗೆ:** ಶ್ರೀಗಳಾದ : ಡಾ॥ ರಾಮದಾಸ್‌ರವರು, ಅಮೆರಿಕಾ ರೂ. ೧೦೦; ಟಿ. ಎಸ್. ಪಂಚಾಕ್ಷರಪ್ಪನವರು, ತುಮಕೂರು ರೂ. ೧೦೧; ವಿ. ಎಲ್. ನಾರಾಯಣ್‌ರವರು, ಬೆಂಗಳೂರು ರೂ. ೫೦೧; ಬೆಂಗಳೂರಿನಲ್ಲಿ ಶ್ರೀಮತಿಯರಾದ : ಪದ್ಮಾವತಮ್ಮನವರು, ರೂ. ೪೦೦; ಲಕ್ಷ್ಮೀದೇವಮ್ಮನವರು, ರೂ. ೧೦೪; ಶಿವಮೊಗ್ಗದಲ್ಲಿ ಇಂದಿರಮ್ಮಗುಂಡೂರಾವ್‌ರವರು, ರೂ. ೫೦೧; ನಾಗರತ್ನಮ್ಮ ವಿ.ಹೆಚ್. ಗಣೇಶಜೋಯಿಸರು,ರೂ. ೫೦೧; ಒಟ್ಟುರೂ. ೨,೨೧೩;

**ಅನುಷ್ಠಾನನಿಧಿಗೆ:** ಶ್ರೀಗಳಾದ: ಡಿ. ಹೆಚ್. ಪುಂಡಲೀಕರಾವ್, ಬೆಂಗಳೂರು ರೂ. ೫೦; ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು ರೂ. ೧೦: ಸಿ.ಎ. ಶಾಮಣ್ಣನವರು, ಬಿದರವಳ್ಳಿ ರೂ. ೧೦; ಶಂಕರಮ್ಮನವರು, ಹೊಳೆನರಸೀಪುರ ರೂ. ೫; ಒಟ್ಟು ರೂ. ೭೫;

**ಗುರುಮಂದಿರನಿಧಿಗೆ:** ಯಾದಾಳಂ ವಂಶೀಕರು, ರೂ. ೧೦; ಶ್ಯಾ॥ ಕೃಷ್ಣಪ್ಪನವರು, ಅಣತಿ; ರೂ. ೨೦; ಒಟ್ಟು ರೂ. ೩೦;

**ಪೂಜಾಮಂದಿರನಿಧಿಗೆ:** ಯಾದಾಳಂ ವಂಶೀಕರು, ರೂ. ೧೫; ಎಸ್.ಜಿ. ಶೇಷಗಿರಿಯವರು, ಬೆಂಗಳೂರು ರೂ. ೧೧; ಒಟ್ಟು ರೂ. ೨೬;

**ಸಂನ್ಯಾಸಿಗಳ ಸತ್ಕಾರಖಾತೆಗೆ:** ಶ್ರೀಮತಿ ಕೆ. ವಿ. ಲಲಿತಾಂಬರವರು, ಹೊಳಲ್ಕೆರೆ, ರೂ. ೧೦;

**ವಿದ್ಯಾರ್ಥಿಖಾತೆಗೆ:** ಸತ್ಯನಾರಾಯಣಸ್ವಾಮಿ, ಬೆಂಗಳೂರು ರೂ. ೧೦;

**ಕಟ್ಟಡನಿಧಿಗೆ:** ಶ್ರೀ ಕೆ. ಎ. ಭರದ್ವಾಜ್, ನವದೆಹಲಿ, ರೂ. ೪೦;

ಮೇಲ್ಕಂಡ ಭಕ್ತರುಗಳಿಗೆಲ್ಲ ನಮ್ಮ ಅಭಿನಂದನೆಗಳು.

# ನಾಲ್ಕನೆಯ ಅಧ್ಯಾಯ

**ಧ್ಯಾನಮ್**-

**ಕಾಲಾಭ್ರಾಭಾಂ ಕಟಾಕ್ಷೈರರಿಕುಲಭಯದಾಂ ಮೌಲಿಬದ್ಧೇಂದುರೇಖಾಂ**
**ಶಂಖಂ ಚಕ್ರಂ ಕೃಪಾಣಂ ತ್ರಿಶಿಖಮಪಿ ಕರೈರುದ್ವಹಂತೀಂ ತ್ರಿನೇತ್ರಾಮ್ ।**
**ಸಿಂಹಸ್ಕಂಧಾಧಿರೂಢಾಂ ತ್ರಿಭುವನಮಖಿಲಂ ತೇಜಸಾ ಪೂರಯಂತೀಂ**
**ಧ್ಯಾಯೇದ್ ದುರ್ಗಾಂ ಜಯಾಖ್ಯಾಂ ತ್ರಿದಶಪರಿವೃತಾಂ ಸೇವಿತಾಂ ಸಿದ್ಧಿಕಾಮೈಃ ॥**

೧. ಕಾಲಮೇಘದಂತೆ ಕಾಂತಿಯುಳ್ಳವಳಾದ, ಹಾಗೂ ಕುಡಿಗಣ್ಣಿನ ನೋಟದಿಂದ ಶತ್ರುಕುಲಕ್ಕೆ ಭಯಂಕರಳಾದ, ಚಂದ್ರಲೇಖಾಕಿರೀಟಧಾರಿಣಿಯಾದ, ಕೈಗಳಲ್ಲಿ ಶಂಖ, ಚಕ್ರ; ಕತ್ತಿ, ತ್ರಿಶೂಲಗಳನ್ನು ಧರಿಸಿದವಳಾದ ಮುಕ್ಕಣ್ಣೆಯಾದ, ಸಿಂಹದ ಬೆನ್ನನ್ನು ಏರಿ ಕುಳಿತಿರುವವಳಾದ, ಹಾಗೂ ತನ್ನ ಕಾಂತಿಯಿಂದ ಮೂರು ಲೋಕಗಳನ್ನೂ ತುಂಬಿರುವಳಾದ, ಸಿದ್ಧಿಕಾಮರಾದ ದೇವತೆಗಳಿಂದ ಸುತ್ತುವರೆಯಲ್ಪಟ್ಟಿರುವ, ಜಯಾ-ಎಂಬ ಹೆಸರಿನ ದುರ್ಗೆಯನ್ನು ಧ್ಯಾನಮಾಡಬೇಕು.

**ಓಂ ಋಷಿರುವಾಚ**-

**ಶಕ್ರಾದಯಃ ಸುರಗಣಾ ನಿಹತೇಽತಿವೀರ್ಯೇ**
**ತಸ್ಮಿನ್ ದುರಾತ್ಮನಿ ಸುರಾರಿಬಲೇ ಚ ದೇವ್ಯಾ ।**
**ತಾಂ ತುಷ್ಟುವುಃ ಪ್ರಣತಿನಮ್ರಶಿರೋಧರಾಂಸಾ-**
**ವಾಗ್ಭಿಃ ಪ್ರಹರ್ಷಪುಲಕೋದ್ಗಮಚಾರುದೇಹಾಃ ॥ ೧ ॥**

೧. ಋಷಿಯಿಂತೆಂದನು : ಆ ದುರಾತ್ಮನೂ ಅತಿ ವೀರ್ಯಶಾಲಿಯೂ ಆದ (ಮಹಿಷನು) ದೇವಿಯಿಂದ ಕೊಲ್ಲಲ್ಪಟ್ಟು ರಾಕ್ಷಸಸೈನ್ಯವೂ ನಾಶವಾಗಲಾಗಿ, ದೇವೇಂದ್ರನೇ ಮುಂತಾದ ದೇವತಾಗಣದವರು ವಂದನಾಪೂರ್ವಕವಾಗಿ ಬಾಗಿದ ತಲೆ-ಕತ್ತುಗಳುಳ್ಳವರಾಗಿ ಹಾಗೂ ಆನಂದದಿಂದ ಮೈನವಿರೆದ್ದ ಸುಂದರ ದೇಹವುಳ್ಳವರಾಗಿ ವಾಕ್ಕುಗಳಿಂದ ಆ ದೇವಿಯನ್ನು ಸ್ತೋತ್ರಮಾಡಿದರು.

**ದೇವ್ಯಾ ಯಯಾ ತತಮಿದಂ ಜಗದಾತ್ಮಶಕ್ತ್ಯಾ**
**ನಿಃಶೇಷದೇವಗಣಶಕ್ತಿಸಮೂಹಮೂರ್ತ್ಯಾ ।**
**ತಾಮಂಬಿಕಾಮಖಿಲದೇವಮಹರ್ಷಿಪೂಜ್ಯಾಂ**
**ಭಕ್ತ್ಯಾ ನತಾಃ ಸ್ಮ ವಿದಧಾತು ಶುಭಾನಿ ಸಾ ನಃ ॥ ೨ ॥**

೨. ಸಮಸ್ತದೇವತೆಗಳ ಗುಂಪಿನ ಶಕ್ತಿಸಮೂಹದ ಮೂರ್ತಿಯಾದ ಯಾವ ದೇವಿಯ ಆತ್ಮಶಕ್ತಿಯಿಂದ ಈ (ಜಗತ್ತೆಲ್ಲವೂ) ವ್ಯಾಪ್ತವಾಗಿರುವದೋ ಆ ಅಂಬಿಕೆಯಾದ, ಸಕಲದೇವಮಹರ್ಷಿಗಳಿಂದಲೂ ಪೂಜ್ಯಳಾದ (ತಾಯಿಯನ್ನು) ನಾವು ಭಕ್ತಿಯಿಂದ ನಮಸ್ಕರಿಸುತ್ತೇವೆ. ಆಕೆಯು ನಮಗೆ ಶುಭವನ್ನುಂಟುಮಾಡಲಿ.

**ಯಸ್ಯಾಃ ಪ್ರಭಾವಮತುಲಂ ಭಗವಾನನಂತೋ**
**ಬ್ರಹ್ಮಾ ಹರಶ್ಚ ನ ಹಿ ವಕ್ತುಮಲಂ ಬಲಂ ಚ ।**
**ಸಾ ಚಂಡಿಕಾಖಿಲಜಗತ್‌ಪರಿಪಾಲನಾಯ**
**ನಾಶಾಯ ಚಾಶುಭಭಯಸ್ಯ ಮತಿಂ ಕರೋತು ॥ ೩ ॥**

೩. ಯಾವಾಕೆಯ ಅಪರಿಮಿತವಾದ ಮಹಿಮೆಯನ್ನೂ ಬಲವನ್ನೂ ಪೂಜ್ಯನಾದ ಆದಿಶೇಷನೂ ಬ್ರಹ್ಮನೂ ಶಿವನೂ ಹೇಳಲು ಅಸಮರ್ಥರೋ ಆ ಚಂಡಿಕೆಯು ಇಡಿಯ ಜಗತ್ತನ್ನು ಕಾಪಾಡುವದಕ್ಕೂ ಅಶುಭ-ಭಯಗಳನ್ನು ನಾಶಮಾಡುವದಕ್ಕೂ ಮನಸ್ಸುಮಾಡುವವಳಾಗಲಿ.

**ಯಾ ಶ್ರೀಃ ಸ್ವಯಂ ಸುಕೃತಿನಾಂ ಭವನೇಷ್ವಲಕ್ಷ್ಮೀಃ**
**ಪಾಪಾತ್ಮನಾಂ ಕೃತಧಿಯಾಂ ಹೃದಯೇಷು ಬುದ್ಧಿಃ ।**
**ಶ್ರದ್ಧಾ ಸತಾಂ ಕುಲಜನಪ್ರಭವಸ್ಯ ಲಜ್ಜಾ**
**ತಾಂ ತ್ವಾಂ ನತಾಃ ಸ್ಮ ಪರಿಪಾಲಯ ದೇವಿ ವಿಶ್ವಮ್ ॥ ೪ ॥**

೪. ಯಾವಳು ಪುಣ್ಯವಂತರ ಮನೆಯ ಸಿರಿಯಾಗಿ ವಿರಾಜಿಸುತ್ತಿರುವಳೋ, ಮತ್ತು ಪಾಪಿಗಳ ಮನೆಯಲ್ಲಿ ದರಿದ್ರಲಕ್ಷ್ಮಿಯಾಗಿ ಕಂಡುಬರುವಳೋ-ಹಾಗೂ ನಿಶ್ಚಯಜ್ಞಾನವುಳ್ಳವರ ಹೃದಯದಲ್ಲಿ ಬುದ್ಧಿಯಾಗಿ ತೋರುತ್ತಿರುವಳೋ, ಸತ್ಪುರುಷರಲ್ಲಿ ಶ್ರದ್ಧಾರೂಪಳಾಗಿಯೂ ಕುಲಸ್ತ್ರೀಯರಲ್ಲಿ (ಪತಿವ್ರತೆಯರಲ್ಲಿ) ನಾಚಿಕೆಯ ರೂಪಳಾಗಿಯೂ ಇರುವಳೋ ಆ ದೇವಿಯನ್ನು ನಾವು ನಮಸ್ಕರಿಸುವೆವು. ಎಲೌ ದೇವಿಯೆ, ಜಗತ್ತನ್ನು ಕಾಪಾಡು.

**ಕಿಂ ವರ್ಣಯಾಮ ತವ ರೂಪಮಚಿಂತ್ಯಮೇತತ್**
**ಕಿಂ ಚಾತಿವೀರ್ಯಮಸುರಕ್ಷಯಕಾರಿ ಭೂರಿ ।**
**ಕಿಂ ಚಾಹವೇಷು ಚರಿತಾನಿ ತವಾದ್ಭುತಾನಿ**
**ಸರ್ವೇಷು ದೇವ್ಯಸುರದೇವಗಣಾದಿಕೇಷು ॥ ೫ ॥**

೫. ಅಚಿಂತ್ಯವಾದ ಈ ನಿನ್ನ ರೂಪವನ್ನು ಏನೆಂದು ವರ್ಣಿಸೋಣ? ಮತ್ತು ಯುದ್ಧದಲ್ಲಿ ರಾಕ್ಷಸರನ್ನು ನಾಶಗೊಳಿಸಿದ (ನಿನ್ನ) ಹೆಚ್ಚಿನ ಬಲವೀರ್ಯಗಳನ್ನು ಏನೆಂದು ಹೊಗಳೋಣ? ಎಲೌ ದೇವಿಯೆ, ಎಲ್ಲಾ ದೇವಾಸುರಗಣಾದಿಗಳಲ್ಲಿಯೂ (ವಿಶಿಷ್ಟಳಾದ) ನಿನ್ನ ಅದ್ಭುತವಾದ ಚರಿತ್ರೆಯನ್ನು ಏನೆಂದು (ಸ್ತುತಿಸೋಣ?)

**ಹೇತುಃ ಸಮಸ್ತಜಗತಾಂ ತ್ರಿಗುಣಾಪಿ ದೋಷೈಃ**
**ನ ಜ್ಞಾಯಸೇ ಹರಿಹರಾದಿಭಿರಪ್ಯಪಾರಾ ।**
**ಸರ್ವಾಶ್ರಯಾಖಿಲಮಿದಂ ಜಗದಂಶಭೂತ-**
**ಮವ್ಯಾಕೃತಾ ಹಿ ಪರಮಾ ಪ್ರಕೃತಿಸ್ತ್ವಮಾದ್ಯಾ ॥ ೬ ॥**

೬. ಸಮಸ್ತಜಗತ್ಕಾರಣಳಾದ ನೀನು ತ್ರಿಗುಣಾತ್ಮಕಳಾಗಿದ್ದರೂ ಹರಿಹರಾದಿದೇವತೆಗಳಿಗೂ (ಅಹಂಕಾರ) ದೋಷದ ನಿಮಿತ್ತವಾಗಿ ತಿಳಿದುಬರುತ್ತಿಲ್ಲ. ಅಪಾರಳೂ ಸರ್ವಕ್ಕೂ ಆಶ್ರಯಳೂ ಆದ ನಿನಗೆ ಈ ಪ್ರಪಂಚವು ಒಂದಂಶಮಾತ್ರವಾಗಿದೆ. ನೀನು ಆದ್ಯಳೂ ಪರಮಳೂ ಆದ ಅವ್ಯಾಕೃತಪ್ರಕೃತಿರೂಪಳೇ ಆಗಿರುವೆ.

**ಯಸ್ಯಾಃ ಸಮಸ್ತಸುರತಾ ಸಮುದೀರಣೇನ**
**ತೃಪ್ತಿಂ ಪ್ರಯಾತಿ ಸಕಲೇಷು ಮಖೇಷು ದೇವಿ ।**
**ಸ್ವಾಹಾಸಿ ವೈ ಪಿತೃಗಣಸ್ಯ ಚ ತೃಪ್ತಿಹೇತುಃ**
**ಉಚ್ಚಾರ್ಯಸೇ ತ್ವಮತ ಏವ ಜನೈಃ ಸ್ವಧಾ ಚ ॥ ೭ ॥**

೭. ಎಲೌ ದೇವಿ, ಎಲ್ಲಾ ಯಜ್ಞಗಳಲ್ಲಿಯೂ ಯಾವ ನಿನ್ನ ಹೆಸರಾದ 'ಸ್ವಾಹಾ' ಎಂಬುದರ ಉಚ್ಚಾರಣೆಯಿಂದ ದೇವತೆಗಳೆಲ್ಲರೂ ತೃಪ್ತಿಯನ್ನು ಹೊಂದುವರೋ ಅಂಥ ಹೆಸರಿನವಳಾಗಿದ್ದೀಯೆ. ಆದ್ದರಿಂದಲೇ ಪಿತೃಗಣಗಳಿಗೆ ತೃಪ್ತಿಯನ್ನುಂಟುಮಾಡುವ 'ಸ್ವಧಾ' ಎಂಬ ನಾಮದಿಂದಲೂ ನೀನು ಜನರಿಂದ ಉಚ್ಚರಿಸಲ್ಪಡುತ್ತಿರುವೆ.

**ಯಾ ಮುಕ್ತಿಹೇತುರವಿಚಿಂತ್ಯಮಹಾವ್ರತಾ ತ್ವಂ**
**ಅಭ್ಯಸ್ಯಸೇ ಸುನಿಯತೇಂದ್ರಿಯತತ್ವಸಾರೈಃ ।**
**ಮೋಕ್ಷಾರ್ಥಿಭಿರ್ಮುನಿಭಿರಸ್ತಸಮಸ್ತದೋಷೈಃ**
**ವಿದ್ಯಾಸಿ ಸಾ ಭಗವತೀ ಪರಮಾ ಹಿ ದೇವಿ ॥ ೮ ॥**

೮. ಚೆನ್ನಾಗಿ ನಿಗ್ರಹಿಸಿದ ಇಂದ್ರಿಯಗಳ ಸಾರವುಳ್ಳ, ಮೋಕ್ಷವನ್ನು ಬಯಸುವ ಹಾಗೂ ಸಮಸ್ತದೋಷಗಳನ್ನೂ ನೀಗಿಕೊಂಡಿರುವ ಮುನಿಗಳಿಂದ, ಮುಕ್ತಿಕಾರಣಳಾಗಿರುವ ನೀನು ಚಿಂತಿಸುವದಕ್ಕಾಗದ ಮಹಾ (ತತ್ತ್ವ)ವ್ರತ (ಗಮ್ಯ)ರೂಪಗಳಾಗಿದ್ದರೂ (ಬಹಳ ಪ್ರಯತ್ನದಿಂದ) ಅಭ್ಯಾಸಮಾಡಲ್ಪಡುತ್ತಿರುವೆ. ಎಲೌ ದೇವಿಯೆ, ಪೂಜ್ಯಳೂ ಪರಮಳೂ ಆದ ಆ (ಬ್ರಹ್ಮ)ವಿದ್ಯಾಸ್ವರೂಪಳೇ ನೀನಾಗಿರುವೆ.

**ಶಬ್ದಾತ್ಮಿಕಾ ಸುವಿಮಲರ್ಗ್ಯಜುಷಾಂ ನಿಧಾನ-**
**ಮುದ್ಗೀಥರಮ್ಯಪದಪಾಠವತಾಂ ಚ ಸಾಮ್ನಾಮ್ ।**
**ದೇವೀ ತ್ರಯೀ ಭಗವತೀ ಭವಭಾವನಾಯ**
**ವಾರ್ತಾ ಚ ಸರ್ವಜಗತಾಂ ಪರಮಾರ್ತಿಹಂತ್ರೀ ॥ ೯ ॥**

೯. ಶಬ್ದಸ್ವರೂಪಳಾದ ನೀನು ನಿರ್ಮಲ(ಸಾಹಿತ್ಯಗಳಾದ) ಋಕ್, ಯಜುಸ್ಸುಗಳಿಗೆ ಕಾರಣಳಾಗಿರುವೆ. ಮತ್ತು ರಮ್ಯವಾದ ಪದಪಾಠಉದ್ಗೀಥ

ಗಾನಗಳುಳ್ಳ ಸಾಮಗಳಿಗೂ (ಮೂಲರೂಪಳಾಗಿರುವೆ). ಭಗವತಿಯೆನಿಸಿರುವವಳೂ ತ್ರಯೀವೇದಮಾತೆಯೆನಿಸಿರುವವಳೂ ನೀನೇ. ಮತ್ತು ಸಕಲಜಗತ್ತಿನ ಅತಿ ಹೆಚ್ಚಿನ ಸಂಕಟಗಳನ್ನೂ ನೀಗುವಂಥ ವಾಗ್ರೂಪಳಾಗಿ ಸಂಸಾರ(ವ್ಯವಹಾರ) ನಿರ್ವಹಣೆಗೂ (ಆಧಾರಳಾಗಿರುವೆ).

**ಮೇಧಾಸಿ ದೇವಿ ವಿದಿತಾಖಿಲಶಾಸ್ತ್ರಸಾರಾ**
**ದುರ್ಗಾಸಿ ದುರ್ಗಭವಸಾಗರನೌರಸಂಗಾ ।**
**ಶ್ರೀಃ ಕೈಟಭಾರಿಹೃದಯೈಕಕೃತಾಧಿವಾಸಾ**
**ಗೌರೀ ತ್ವಮೇವ ಶಶಿಮೌಲಿಕೃತಪ್ರತಿಷ್ಠಾ ॥ ೧೦ ॥**

೧೦. ಎಲೌ ದೇವಿಯೆ, ಸಕಲಶಾಸ್ತ್ರಗಳ ಸಾರವನ್ನೂ ಬಲ್ಲ ಮೇಧಾದೇವಿಯೇ ನೀನಾಗಿರುವೆ. ದಾಟಲಸಾಧ್ಯವಾದ ಸಂಸಾರವೆಂಬ ಸಾಗರದಲ್ಲಿ ಅಂಟಿಕೊಳ್ಳದ ಸ್ವಭಾವದ ದುರ್ಗೆಯೆಂಬ ಹಡಗಾಗಿ ಇದ್ದುಕೊಂಡಿರುವೆ. ಕೈಟಭಶತ್ರುವಾದ (ವಿಷ್ಣುವಿನ) ಹೃದಯವನ್ನೇ ಮುಖ್ಯವಾಸಸ್ಥಾನವಾಗಿ ಮಾಡಿಕೊಂಡು ವಾಸಮಾಡುತ್ತಿರುವ ಮಹಾಲಕ್ಷ್ಮಿಯೇ ನೀನಾಗಿರುವೆ. ಮತ್ತು ಚಂದ್ರಮೌಳಿಯಾದ ಮಹಾದೇವನ ಅರ್ಧಾಂಗಿಯಾಗಿ ನೆಲಸಿರುವ ಗೌರಿಯೂ ನೀನೇ.

**ಈಷತ್ ಸಹಾಸಮಮಲಂ ಪರಿಪೂರ್ಣಚಂದ್ರ-**
**ಬಿಂಬಾನುಕಾರಿ ಕನಕೋತ್ತಮಕಾಂತಿಕಾಂತಮ್ ।**
**ಅತ್ಯದ್ಭುತಂ ಪ್ರಹೃತಮಾತ್ತರುಷಾ ತಥಾಪಿ**
**ವಕ್ತ್ರಂ ವಿಲೋಕ್ಯ ಸಹಸಾ ಮಹಿಷಾಸುರೇಣ ॥ ೧೧ ॥**
**ದೃಷ್ಟ್ವಾ ತು ದೇವಿ ಕುಪಿತಂ ಭ್ರುಕುಟೀಕರಾಲ-**
**ಮುದ್ಯಚ್ಛಶಾಂಕಸದೃಶಚ್ಛವಿ ಯನ್ನ ಸದ್ಯಃ ।**
**ಪ್ರಾಣಾನ್ ಮುಮೋಚ ಮಹಿಷಃ ತದತೀವ ಚಿತ್ರಂ**
**ಕೈರ್ಜೀವ್ಯತೇ ಹಿ ಕುಪಿತಾಂತಕದರ್ಶನೇನ ॥ ೧೨ ॥**

೧೧-೧೨. ಸ್ವಲ್ಪಮಟ್ಟಿನ ಮುಗುಳುನಗೆಯಿಂದ ಕೂಡಿ ಶುಭ್ರವಾಗಿರುವ, ಪೂರ್ಣಚಂದ್ರನ ಬಿಂಬವನ್ನು ಹೋಲುವ, ಉತ್ತಮವಾದ (ಅಪ್ಪಟ) ಚಿನ್ನದಂತೆ ಕಾಂತಿಯುಕ್ತವಾದ ಮತ್ತು ಕೋಪದಿಂದ (ರಾಕ್ಷಸನು) ಹೊಡೆಯಲ್ಪಡುವಾಗಲೂ ಅತ್ಯದ್ಭುತ(ಸೌಂದರ್ಯ)ದಿಂದಲೇ ಕೂಡಿದ್ದ ಹಾಗೂ ಉದಯಿಸುತ್ತಿರುವ ಚಂದ್ರನಂತೆ ಕಾಂತಿಯುಳ್ಳ ನಿನ್ನ ಮುಖವನ್ನು ಮಹಿಷಾಸುರನು ಕಂಡಾಗ-ಎಲೌ ದೇವಿಯೆ, ಅದು ಗಂಟಿಕ್ಕಿದ ಹುಬ್ಬುಗಳಿಂದ ವಿಕೃತವಾಗಿ ಕೋಪದಿಂದ (ದುಗುಡವಾಗಿ)ದ್ದುಕೊಂಡಿತ್ತಲ್ಲವೆ ? ಅದನ್ನು ಕಂಡಕೂಡಲೆ ಆ ಮಹಿಷನು ಪ್ರಾಣತ್ಯಾಗವನ್ನು ಮಾಡಲಿಲ್ಲವಷ್ಟೆ! ಅದು ಆತ್ಯಾಶ್ಚರ್ಯಕರವಾಗಿದೆ. ಏಕೆಂದರೆ ಕೋಪಗೊಂಡ ಯಮನ ದರ್ಶನವಾದಾಗ ಯಾರು ತಾನೆ ಬದುಕಿದ್ದಾರು ?

**ದೇವಿ ಪ್ರಸೀದ ಪರಮಾ ಭವತೀ ಭವಾಯ**
**ಸದ್ಯೋ ವಿನಾಶಯಸಿ ಕೋಪವತೀ ಕುಲಾನಿ ।**
**ವಿಜ್ಞಾತಮೇತದಧುನೈವ ಯದಸ್ತಮೇತ-**
**ನ್ನೀತಂ ಬಲಂ ಸುವಿಪುಲಂ ಮಹಿಷಾಸುರಸ್ಯ ॥ ೧೩ ॥**

೧೩. ಪರಮಳೂ ಪೂಜ್ಯಳೂ ಆದ ದೇವಿಯೆ, ನೀನು (ಜಗತ್ತಿನ) ಹುಟ್ಟುಬೆಳವಣಿಗೆಗಳಿಗಾಗಿ ಪ್ರಸನ್ನಳಾಗು. ಏಕೆಂದರೆ ಕುಪಿತಳಾದೆಯಾದರೆ ಕುಲಗಳನ್ನೇ ಕೂಡಲೆ ನಾಶಮಾಡಿಬಿಡುವೆ. ಮಹಿಷಾಸುರನ ಅತಿದೊಡ್ಡ ಬಲಿಷ್ಠವಾದ (ಸೈನ್ಯ)ವೆಲ್ಲವೂ ಈಗಲೇ ವಿನಾಶವನ್ನು ಹೊಂದಿದ್ದನ್ನು ಕಂಡ (ನಮಗೆ) ಈ ವಿಚಾರವು ಗೊತ್ತಾಗಿದೆ.

**ತೇ ಸಂಮತಾ ಜನಪದೇಷು ಧನಾನಿ ತೇಷಾಂ**
**ತೇಷಾಂ ಯಶಾಂಸಿ ನ ಚ ಸೀದತಿ ಧರ್ಮವರ್ಗಃ ।**
**ಧನ್ಯಾಸ್ತ ಏವ ನಿಭೃತಾತ್ಮಜಭೃತ್ಯದಾರಾ**
**ಯೇಷಾಂ ಸದಾಽಭ್ಯುದಯದಾ ಭವತೀ ಪ್ರಸನ್ನಾ ॥ ೧೪ ॥**

೧೪. ಯಾರ ವಿಷಯಕ್ಕೆ ನೀನು ಅಭ್ಯುದಯದಾತ್ರಿಯಾಗಿ ಪ್ರಸನ್ನಳಾಗುವೆಯೋ ಅವರೇ ರಾಷ್ಟ್ರಗಳಲ್ಲಿ ಮಾನ್ಯರಾಗುವರು. ಅಂಥವರಿಗೆ ಧನ (ಲಕ್ಷ್ಮಿಯು) ಒಲಿಯುವಳು. ಅವರುಗಳಿಗೇ ಯಶಸ್ಸೂ (ಕೀರ್ತಿಯೂ) ಲಭಿಸಲಿದೆ. ಅಂಥವರ ಧರ್ಮಾನುಷ್ಠಾನಪರಂಪರೆಗಳು ಕುಸಿಯುವದಿಲ್ಲ. ಮಕ್ಕಳು, ಆಳುಗಳು, ಹೆಂಡಂದಿರನ್ನು (ಚೆನ್ನಾಗಿ) ಕಾಪಾಡಿಕೊಳ್ಳುವ ಅಂಥ ನಿನ್ನ (ಭಕ್ತರೇ) ಧನ್ಯರು.

**ಧರ್ಮ್ಯಾಣಿ ದೇವಿ ಸಕಲಾನಿ ಸದೈವ ಕರ್ಮಾ-**
**ಣ್ಯತ್ಯಾದೃತಃ ಪ್ರತಿದಿನಂ ಸುಕೃತೀ ಕರೋತಿ ।**
**ಸ್ವರ್ಗಂ ಪ್ರಯಾತಿ ಚ ತತೋ ಭವತೀಪ್ರಸಾದಾ-**
**ಲ್ಲೋಕತ್ರಯೇಽಪಿ ಫಲದಾ ನನು ದೇವಿ ತೇನ ॥ ೧೫ ॥**

೧೫. ಎಲೌ ದೇವಿ, ಪುಣ್ಯವಂತನಾದವನು ಯಾವಾಗಲೂ ಬಹಳ ಶ್ರದ್ಧಾಪೂರ್ವಕವಾಗಿ ಎಲ್ಲಾ ಧರ್ಮಕಾರ್ಯಗಳನ್ನೂ ಪ್ರತಿದಿನವೂ ಮಾಡುವನು. ಮತ್ತು ನಿನ್ನ ಅನುಗ್ರಹದಿಂದ ಅನಂತರ ಸ್ವರ್ಗವನ್ನೂ ಹೊಂದುವನು. ಆದರಿಂದ ನೀನು ಮೂರು ಲೋಕಗಳಲ್ಲಿಯೂ (ಕರ್ಮ)ಫಲಪ್ರದಳಾಗಿರುವೆ.

**ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜಂತೋಃ**
**ಸ್ವಸ್ಥೈಃ ಸ್ಮೃತಾ ಮತಿಮತೀವ ಶುಭಾಂ ದದಾಸಿ ।**
**ದಾರಿದ್ರ್ಯದುಃಖಭಯಹಾರಿಣಿ ಕಾ ತ್ವದನ್ಯಾ**
**ಸರ್ವೋಪಕಾರಕರಣಾಯ ಸದಾರ್ದ್ರಚಿತ್ತಾ ॥ ೧೬ ॥**

೧೬. ಎಲೌ ದುರ್ಗೆಯೆ, ನೀನು ನೆನೆಯಲ್ಪಟ್ಟೆಯಾದರೆ ಎಲ್ಲಾ ಪ್ರಾಣಿಗಳ ಸಕಲವಿಧವಾದ ಭಯವನ್ನೂ ಕಳೆಯುವವಳಾಗುವೆ. ಇನ್ನು ಶಾಂತಚಿತ್ತದಿಂದ ಸ್ಮರಿಸಲ್ಪಡುವೆಯಾದರೆ ಅತಿ ಹೆಚ್ಚಿನ ಕಲ್ಯಾಣಕರವಾದ ಬುದ್ಧಿಯನ್ನು ನೀಡುವೆಯಾಗುವೆ. ದಾರಿದ್ರ್ಯ ದುಃಖಭಯಗಳನ್ನು ಪರಿಹರಿಸುವ ದೇವಿಯೆ, (ಪ್ರಾಣಿಗಳಿಗೆ) ಎಲ್ಲಾ ರೀತಿಯ ಉಪಕಾರಗಳನ್ನೂ ಮಾಡುವದಕ್ಕಾಗಿಯೇ ಯಾವಾಗಲೂ ಕರಗಿದ ಹೃದಯವುಳ್ಳವಳಾಗಿರುವಂಥವಳು ನಿನ್ನನ್ನು ಬಿಟ್ಟರೆ ಬೇರೆ ಯಾವಳಿದ್ದಾಳು ?

**ಏಭಿರ್ಹತೈರ್ಜಗದುಪೈತಿ ಸುಖಂ ತಥೈತೇ**
**ಕುರ್ವಂತು ನಾಮ ನರಕಾಯ ಚಿರಾಯ ಪಾಪಮ್ ।**
**ಸಂಗ್ರಾಮಮೃತ್ಯುಮಧಿಗಮ್ಯ ದಿವಂ ಪ್ರಯಾಂತು**
**ಮತ್ವೇತಿ ನೂನಮಹಿತಾನ್ ವಿನಿಹಂಸಿ ದೇವಿ ॥ ೧೭ ॥**

೧೭. ಎಲೌ ದೇವಿಯೆ, ಈ (ರಾಕ್ಷಸರು) ಕೊಲ್ಲಲ್ಪಟ್ಟದ್ದರಿಂದ ಜಗತ್ತು ಸುಖವನ್ನು ಹೊಂದಿರುತ್ತದೆ. ಹೀಗಿದ್ದರೂ (ಈವರೆಗೂ) ರಾಕ್ಷಸರೇಕೆ ಜಗತ್ತನ್ನು ಹಿಂಸಿಸಿದರು ? ಎಂದರೆ ನಿನ್ನ ಸಂಕಲ್ಪವು ಹೀಗಿರಬೇಕು. ಇವರುಗಳು ಬಹಳ ಕಾಲದ ನರಕವಾಸಕ್ಕಾಗಿ ಪಾಪವನ್ನು ಮಾಡಲಿ. ಆದರೇನು ? ಅನಂತರ ಯುದ್ಧದಲ್ಲಿ (ಹಿಮ್ಮೆಟ್ಟದೆ ಕಾದಾಡಿ) ಮೃತರಾಗಿ ಸ್ವರ್ಗಕ್ಕೆ ಹೋಗಲಿ– ಹೀಗೆಂದು ಭಾವಿಸಿ ನೀನು ಈ ಲೋಕಕಂಟಕರನ್ನು ಸಂಹಾರಮಾಡಿರುವೆ.

**ದೃಷ್ಟ್ವೈವ ಕಿಂ ನ ಭವತೀ ಪ್ರಕರೋತಿ ಭಸ್ಮ**
**ಸರ್ವಾಸುರಾನರಿಷು ಯತ್ಪ್ರಹಿಣೋಷಿ ಶಸ್ತ್ರಮ್ ।**
**ಲೋಕಾನ್ ಪ್ರಯಾಂತು ರಿಪವೋಽಪಿ ಹಿ ಶಸ್ತ್ರಪೂತಾ**
**ಇತ್ಥಂ ಮತಿರ್ಭವತಿ ತೇಷ್ವಪಿ ತೇಽತಿಸಾಧ್ವೀ ॥ ೧೮ ॥**

೧೮. ಎಲ್ಲಾ ರಾಕ್ಷಸರನ್ನೂ ನೋಡಿದ ಮಾತ್ರದಿಂದಲೇ ನೀನು ಸುಟ್ಟು ಹಾಕದೆ ಇರುವದೇಕೆಂದರೆ, ಮತ್ತು ಆ ಶತ್ರುಗಳನ್ನು ಸಂಹರಿಸಲು ಶಸ್ತ್ರಗಳನ್ನು ಬಳಸುವೆಯೇಕೆಂದರೆ– ಶಸ್ತ್ರ(ಪ್ರಹಾರದಿಂದ) ಪರಿಶುದ್ಧರಾದ ಅವರು ಶತ್ರುಗಳೇ ಆದರೂ (ಪುಣ್ಯ)ಲೋಕಗಳನ್ನೇ ಪಡೆಯಲಿ–ಎಂಬಿದೇ ಉದ್ದೇಶವಾಗಿದೆ. ಹೀಗೆ ಆ (ರಾಕ್ಷಸರುಗಳ) ವಿಷಯದಲ್ಲಿಯೂ ನಿನಗೆ ಅತಿ ಹೆಚ್ಚಿನ ಸದ್ಬುದ್ಧಿಯೇ ಉಂಟಾಗಿರುತ್ತದೆ.

**ಖಡ್ಗಪ್ರಭಾನಿಕರವಿಸ್ಫುರಣೈಸ್ತಥೋಗ್ರೈಃ**
**ಶೂಲಾಗ್ರಕಾಂತಿನಿವಹೇನ ದೃಶೋಽಸುರಾಣಾಮ್ ।**
**ಯನ್ನಾಗತಾ ವಿಲಯಮಂಶುಮದಿಂದುಖಂಡ–**
**ಯೋಗ್ಯಾನನಂ ತವ ವಿಲೋಕಯತಾಂ ತದೇತತ್ ॥ ೧೯ ॥**

೧೯. ಕತ್ತಿಯು ಹೊಳೆಯುವ ಕಾಂತಿಸಮೂಹದ ಪ್ರಸಾರದಿಂದಲೂ ಹಾಗೊ ಭಯಂಕರವಾದ ಶೂಲದ ತುದಿಯ ಪ್ರಕಾಶದಿಂದಲೂ ರಾಕ್ಷಸರ ಕಣ್ಣುಗಳು ಕುರುಡಾಗಿಹೋಗದೆ ಇದ್ದದ್ದೇಕೆಂದರೆ-ಚಂದ್ರಕಲೆಗೆ ಸಮಾನವಾದ ಕಾಂತಿಯುಳ್ಳ ಉತ್ತಮ (ರೂಪಸಂಪನ್ನವಾದ) ನಿನ್ನ ಮುಖವನ್ನೂ ಅವರು ನೋಡುತ್ತಿದ್ದುದೇ ಕಾರಣವಿರಬೇಕು. (ನಿನ್ನ ದರ್ಶನವೇ ಅವರ ಕಣ್ಣುಗಳನ್ನು ರಕ್ಷಿಸಿದೆ).

**ದುರ್ವೃತ್ತವೃತ್ತಶಮನಂ ತವ ದೇವಿ ಶೀಲಂ**
**ರೂಪಂ ತಥೈತದವಿಚಿಂತ್ಯಮತುಲ್ಯಮನ್ಯೈಃ ।**
**ವೀರ್ಯಂ ಚ ಹಂತೃ ಹೃತದೇವಪರಾಕ್ರಮಾಣಾಂ**
**ವೈರಿಷ್ವಪಿ ಪ್ರಕಟಿತೈವ ದಯಾ ತ್ವಯೇತ್ಥಮ್ ॥ ೨೦ ॥**

೨೦. ಎಲೌ ದೇವಿಯೆ, ನಿನ್ನ ನಡತೆಯು ದುರ್ನಡತೆಯವರ ನಡೆಯನ್ನು ತಡೆಗಟ್ಟತಕ್ಕದ್ದು. ರೂಪವಾದರೊ, ಬೇರೊಬ್ಬರಿಗೆ ಹೋಲಿಸಲಾಗದ ಅಚಿಂತ್ಯ ಮಹಿಮಾನ್ವಿತವಾದುದು. ವೀರ್ಯವಾದರೊ, ದೇವತೆಗಳ ಶತ್ರುಗಳನ್ನು ನಾಶಗೊಳಿಸತಕ್ಕದ್ದು. ಹೀಗೆ ನೀನು ವೈರಿಗಳಲ್ಲಿಯೂ ದಯೆಯನ್ನೇ ತೋರಿರುತ್ತೀಯೆ.

**ಕೇನೋಪಮಾ ಭವತು ತೇಽಸ್ಯ ಪರಾಕ್ರಮಸ್ಯ**
**ರೂಪಂ ಚ ಶತ್ರುಭಯಕಾರ್ಯತಿಹಾರಿ ಕುತ್ರ ।**
**ಚಿತ್ತೇ ಕೃಪಾ ಸಮರನಿಷ್ಠುರತಾ ಚ ದೃಷ್ಟಾ**
**ತ್ವಯ್ಯೇವ ದೇವಿ ವರದೇ ಭುವನತ್ರಯೇಽಪಿ ॥ ೨೧ ॥**

೨೧. ನಿನ್ನ ಪರಾಕ್ರಮಕ್ಕಾಗಲಿ, ಶುತ್ರಗಳಿಗೆ ಭಯವನ್ನುಂಟುಮಾಡುವದಾದರೂ ಮನಸ್ಸನ್ನು ಸೆಳೆಯುತ್ತಿರುವ ನಿನ್ನ ರೂಪಕ್ಕಾಗಲಿ– ಉಪಮಾನವೇನಿದ್ದೀತು? ಮನಸ್ಸಿನಲ್ಲಿ ದಯೆಯೂ (ಹೊರಗಡೆ) ಯುದ್ಧ(ರಂಗದಲ್ಲಿ) ದಿಟ್ಟತನವೂ ಕಂಡುಬರುತ್ತಿತ್ತಲ್ಲವೆ, ಇದು ಎಲೌ ವರದಳೆ, ಮೂರು ಲೋಕಗಳಲ್ಲಿ ಹುಡುಕಿದರೂ ನಿನ್ನಲ್ಲಿ ಮಾತ್ರವೇ (ಈ ಬಗೆಯ ನಡೆಯು ಕಂಡುಬರುತ್ತಿದೆ).

**ತ್ರೈಲೋಕ್ಯಮೇತದಖಿಲಂ ರಿಪುನಾಶನೇನ**
**ತ್ರಾತಂ ತ್ವಯಾ ಸಮರಮೂರ್ಧನಿ ತೇಽಪಿ ಹತ್ವಾ ।**
**ನೀತಾ ದಿವಂ ರಿಪುಗಣಾ ಭಯಮಪ್ಯಪಾಸ್ತಂ**
**ಅಸ್ಮಾಕಮುನ್ಮದಸುರಾರಿಭವಂ ನಮಸ್ತೇ ॥ ೨೨ ॥**

೨೨. ನೀನು ಯುದ್ಧರಂಗದಲ್ಲಿ ಶತ್ರುಸಂಹಾರಮಾಡುವ ಮೂಲಕ ಈ ಎಲ್ಲಾ ಮೂರು ಲೋಕಗಳನ್ನೂ ಕಾಪಾಡಿರುತ್ತೀಯೆ. ಶತ್ರುಗಳ ಆ ಗುಂಪನ್ನಾದರೋ ನೀನು ಸಂಹಾರಮಾಡಿ ಅವರನ್ನೂ ಸ್ವರ್ಗಲೋಕಕ್ಕೆ ಕಳುಹಿಸಿರು

ತ್ರೀಯೆ. ಹಾಗೆಯೇ ಕೊಬ್ಬಿದ ದೇವಶತ್ರುಗಳಾದ ಅವರಿಂದ ಸಂಭವಿಸಿದ್ದ ನಮ್ಮ ಭಯವನ್ನೂ ಕಳೆದಿರುವೆ. ಇಂಥ ನಿನಗೆ ನಮಸ್ಕಾರವು.

**ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಂಬಿಕೇ ।**
**ಘಂಟಾಸ್ವನೇನ ನಃ ಪಾಹಿ ಚಾಪಜ್ಯಾನಿಃಸ್ವನೇನ ಚ ॥ ೨೩ ॥**
**ಪ್ರಾಚ್ಯಾಂ ರಕ್ಷ ಪ್ರತೀಚ್ಯಾಂ ಚ ಚಂಡಿಕೇ ರಕ್ಷ ದಕ್ಷಿಣೇ ।**
**ಭ್ರಾಮಣೇನಾತ್ಮಶೂಲಸ್ಯ ಉತ್ತರಸ್ಯಾಂ ತಥೇಶ್ವರಿ ॥ ೨೪ ॥**

೨೩-೨೪. ಎಲೌ ದೇವಿಯೆ, ನಿನ್ನ ಶೂಲದಿಂದಲೂ ಖಡ್ಗದಿಂದಲೂ ನಮ್ಮನ್ನು ಕಾಪಾಡು. ಅಂಬಿಕೆಯೆ, ನಿನ್ನ ಘಂಟೆಯ ಸದ್ದಿನಿಂದಲೂ ಬಿಲ್ಲಿನ ಹಗ್ಗದ ಧ್ವನಿಯಿಂದಲೂ ನಮ್ಮನ್ನು ಕಾಪಾಡು. ಚಂಡಿಕೆಯೆ, ಈಶ್ವರಿಯೆ, ಪೂರ್ವ, ಪಶ್ಚಿಮ, ದಕ್ಷಿಣೋತ್ತರ ದಿಕ್ಕುಗಳಲ್ಲೆಲ್ಲ ನಿನ್ನ ಶೂಲವನ್ನು ತಿರುಗಿಸುವದರಿಂದ ಕಾಪಾಡುವವಳಾಗು.

**ಸೌಮ್ಯಾನಿ ಯಾನಿ ರೂಪಾಣಿ ತ್ರೈಲೋಕ್ಯೇ ವಿಚರಂತಿ ತೇ ।**
**ಯಾನಿ ಚಾತ್ಯರ್ಥಘೋರಾಣಿ ತೈ ರಕ್ಷಾಸ್ಮಾನ್ ತಥಾ ಭುವಮ್ ॥೨೫॥**
**ಖಡ್ಗಶೂಲಗದಾದೀನಿ ಯಾನಿ ಚಾಸ್ತ್ರಾಣಿ ತೇಽಂಬಿಕೇ ।**
**ಕರಪಲ್ಲವಸಂಗೀನಿ ತೈರಸ್ಮಾನ್ ರಕ್ಷ ಸರ್ವತಃ ॥ ೨೬ ॥**

೨೫-೨೬. ಮೂರು ಲೋಕಗಳಲ್ಲಿಯೂ ಸಂಚರಿಸುವ ನಿನ್ನ ಯಾವ ಸೌಮ್ಯರೂಪಗಳಿವೆಯೋ ಹಾಗೂ ಅತಿ ಹೆಚ್ಚಿನ ಭಯಂಕರವಾದ (ರೂಪಗಳಿವೆಯೋ) ಅವುಗಳಿಂದ ನಮ್ಮನ್ನು ಹಾಗೂ ಭೂಮಿಯನ್ನೂ ಕಾಪಾಡುವವಳಾಗು. ಎಲೌ ಅಂಬಿಕೆಯೆ, ಕತ್ತಿ, ಶೂಲ, ಗದೆ- ಮುಂತಾದ ಯಾವ ನಿನ್ನ ಕೋಮಲವಾದ ಕೈಗಳಲ್ಲಿ ಧರಿಸಿರುವ ಆಯುಧಗಳಿವೆಯೋ ಅವುಗಳಿಂದ ಎಲ್ಲೆಲ್ಲಿಯೂ ನಮ್ಮನ್ನು ಕಾಪಾಡುವವಳಾಗು.

**ಋಷಿರುವಾಚ—**
**ಏವಂ ಸ್ತುತಾ ಸುರೈರ್ದಿವ್ಯೈಃ ಕುಸುಮೈರ್ನಂದನೋದ್ಭವೈಃ ।**
**ಅರ್ಚಿತಾ ಜಗತಾಂ ಧಾತ್ರೀ ತಥಾ ಗಂಧಾನುಲೇಪನೈಃ ॥೨೭॥**
**ಭಕ್ತ್ಯಾ ಸಮಸ್ತೈಃ ತ್ರಿದಶೈಃ ದಿವ್ಯೈರ್ಧೂಪೈಸ್ತು ಧೂಪಿತಾ ।**
**ಪ್ರಾಹ ಪ್ರಸಾದಸುಮುಖೀ ಸಮಸ್ತಾನ್ ಪ್ರಣತಾನ್ ಸುರಾನ್ ॥೨೮॥**

೨೭-೨೮. ಋಷಿಯಿಂತೆಂದನು : ದೇವತೆಗಳಿಂದ ಹೀಗೆ ಸ್ತೋತ್ರ ಮಾಡಲ್ಪಟ್ಟ ಹಾಗೂ ನಂದನವನದ ಹೂಗಳಿಂದಲೂ ಗಂಧ-ಲೇಪನಗಳಿಂದಲೂ ಪೂಜಿಸಲ್ಪಟ್ಟ ಜಗನ್ಮಾತೆಯು ಸಂತುಷ್ಟಳಾದಳು. ಮತ್ತು ಭಕ್ತಿನಮ್ರಳಾದ ಎಲ್ಲಾ ದೇವತೆಗಳೂ ದಿವ್ಯವಾದ ಸುವಾಸನೆಯ ಧೂಪಗಳಿಂದ ಸಂತೋಷ

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,**
**ನಂ. 68, 2ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**
( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

**1985ನೆಯ ಫೆಬ್ರುವರಿ ಮಾಹೆಯಲ್ಲಿ ನಡೆಯುವ**
**ವಿಶೇಷ ಉಪನ್ಯಾಸಗಳು ; ಸಂಜೆ 5 ರಿಂದ 6 ರ ವರೆಗೆ**

2-2-85ನೆಯ ಶನಿವಾರ
ಪೂಜ್ಯ ಮಾತಾಜಿ ಪಾಪಕ್ಕನವರಿಂದ **"ಗುರುಸೇವಾಭಾಗ್ಯ"**

3-2-85ನೆಯ ಭಾನುವಾರ
ಶ್ರೀ॥ ಕೆ. ರಾಜಗೋಪಾಲಾಚಾರ್, M.A., Phd., ರವರಿಂದ
**"ಸಂಸ್ಕೃತಸಾಹಿತ್ಯದಲ್ಲಿ ಜೀವನ"**

9-2-85ನೆಯ ಶನಿವಾರ
ಬ್ರಹ್ಮಜ್ಞಕವಿ ದೇವರಾಯಕುಲಕರಣಿಗಳವರಿಂದ
**"ಸಾಧನಸಿದ್ಧಾಂತಗಳ ಸಮನ್ವಯ"**

10-2-85ನೆಯ ಭಾನುವಾರ
ಪ್ರೊ. ಸಿ. ಅನಂತಾಚಾರ್‌ರವರಿಂದ **"ಸೃಷ್ಟಿಮೀಮಾಂಸೆ"**

16-2-85ನೆಯ ಶನಿವಾರ
ಪ್ರೊ. ಎನ್. ಸಿ. ಶಂಕರನಾರಾಯಣರಾವ್, M.A., Phd., ರವರಿಂದ
**"ಮನಶ್ಶಾಸ್ತ್ರದಂತೆ ಕನಸಿನ ವಿಶ್ಲೇಷಣೆ"**

17-2-85ನೆಯ ಭಾನುವಾರ
ಅಧ್ಯಾತ್ಮವಿದ್ಯಾಪ್ರವೀಣ ಕೆ. ಜಿ. ಸುಬ್ರಾಯಶರ್ಮರವರಿಂದ
**"ಮಹಾಶಿವರಾತ್ರಿವ್ರತ"**

23-2-85ನೆಯ ಶನಿವಾರ
ಶ್ರೀ॥ ಎ. ಕೆ. ಸುಬ್ರಹ್ಮಣ್ಯಂ B.E. (Principal Retd.) ರವರಿಂದ
**"ಗೌಡಪಾದಹೃದಯ"**

24-2-85ನೆಯ ಭಾನುವಾರ
ಪ್ರೊ. ಬಿ. ಭೀಮಸೇನರಾವ್, M.Sc., ರವರಿಂದ **"ಕವಿರತ್ನ ಕಾಳಿದಾಸ"**

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
**ತಾ॥ 1-2-1985.**

**ಕೆ. ಜಿ. ಸುಬ್ರಾಯಶರ್ಮ,**
**ಕಾರ್ಯದರ್ಶಿ.**

**ADHYATMA Prakasha**

Regd. No.
KRNI-5

Registered with the Registrar of News-papers
for India under No. R. N. 13244/57

# ಕೇಳಿರಿ

ಪರಮೇಶ್ವರನೇ ಜೀವರೆಲ್ಲರಿಗೂ ಆಶ್ರಯಸ್ಥಾನನು, ಪರಮವಾದ ಪರಾಯಣವು-ಎಂದು ಶ್ರುತಿಸ್ಮೃತಿಗಳಲ್ಲಿ ತಿಳಿಸಿದೆ. ಜೀವನು ತನ್ನ ಶರೀರೇಂದ್ರಿಯಮನೋಬುದ್ಧಿಗಳ ಸಹಾಯದಿಂದ ವ್ಯವಹಾರಗಳನ್ನು ನಿರ್ವಹಿಸಿ ಬಳಲಿದಾಗ ಕೃಪಾಳುವಾದ ಆ ಭಗವಂತನು ಅವನನ್ನು ತನ್ನಲ್ಲಿಯೇ ಒಂದುಗೂಡಿಸಿಕೊಂಡು ಅಮೃತಸ್ವರೂಪದಲ್ಲಿ ಅದ್ದಿಬಿಡುವನು. ಇದರಿಂದ ಜೀವನ ಆಯಾಸವೆಲ್ಲ ಪರಿಹಾರವಾಗಿಬಿಡುವದು. ಇದೇ ಸುಷುಪ್ತಿಯು. ಹೀಗೆ ಜೀವನು ಪರಮಾತ್ಮನಲ್ಲಿ ಒಂದಾಗುವದರ ಅನುಭವವನ್ನೇ ಪ್ರತಿದಿನವೂ ನಾವು ಸುಷುಪ್ತಿಯಲ್ಲಿ ಪಡೆಯುತ್ತಿದ್ದೇವೆ.

To.

Sri




M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy
as Secretary for The Adhyatma Prakasha Karyalaya,
At The Adhyatma Prakasha Press, Holenarsipur - 573211
6—2—1985